# ಹಗಲುಗನಸುಗಳು

ಎ. ಎನ್. ಮೂರ್ತಿರಾವ್




ಬೆಲೆ: ೧೨ ಆಣೆ

# ವಿವರ


| | ಪುಟ |
|---|---|
| ಅರಿಕೆ | v |
| ಗೌರಜ್ಜಿ | ೧ |
| ಹಗಲುಗನಸುಗಳು | ೯ |
| ಹೂವುಗಳು | ೨೪ |
| ಗಾಡಿಯ ಪ್ರಯಾಣ | ೩೫ |
| ಕುರುಡ | ೫೨ |
| ಲಲಿತೆಯ ವಿದ್ಯಾಭ್ಯಾಸ | ೫೯ |
| ಪ್ರಣಯಯಾತ್ರೆ | ೭೧ |

# ಅರಿಕೆ

ಈ ಸಂಗ್ರಹದಲ್ಲಿರುವ ಪ್ರಬಂಧಗಳಲ್ಲಿ 'ಗೌರಜ್ಜಿ' 'ಹೂವುಗಳು' ಎಂಬುವು 'ಪ್ರಬೋಧಕ'ದಲ್ಲಿಯೂ, 'ಕುರುಡ' ಎಂಬುದು 'ಕಥಾಂಜಲಿ'ಯಲ್ಲಿಯೂ, ಉಳಿದುವು 'ಪ್ರಬುದ್ಧಕರ್ಣಾಟಕ'ದಲ್ಲಿಯೂ ಪ್ರಕಟವಾಗಿದ್ದುವು. ಈ ಸಂಗ್ರಹಕ್ಕೆ ೧೯೩೬ನೆಯ ಇಸವಿಯ ದೇವರಾಜ ಬಹದ್ದೂರ್ ಬಹುಮಾನಗಳಲ್ಲಿ ಎರಡನೆಯ ಬಹುಮಾನ ದೊರೆಯಿತು. ಈ ಪ್ರೋತ್ಸಾಹಕ್ಕೆ ನಾನು ಕೃತಜ್ಞನಾಗಿದ್ದೇನೆ.

ಈ ಪ್ರಬಂಧಗಳನ್ನು ಪುಸ್ತಕ ರೂಪದಲ್ಲಿ ಪ್ರಕಟಿಸಿದ ಶಿವಮೊಗ್ಗ ಕರ್ಣಾಟಕ ಸಂಘದವರಿಗೂ, ಅವುಗಳಿಗೆ ಮೊದಲು ಆಶ್ರಯವನ್ನು ಕೊಟ್ಟ ಪತ್ರಿಕಾ ಸಂಪಾದಕರಿಗೂ, ಅತ್ಯಲ್ಪ ಕಾಲದಲ್ಲಿ ಪುಸ್ತಕವನ್ನು ಸುಂದರವಾಗಿ ಮುದ್ರಿಸಿಕೊಟ್ಟ ಬೆಂಗಳೂರು ಪ್ರೆಸ್ಸಿನವರಿಗೂ ನಾನು ಋಣಿಯಾಗಿದ್ದೇನೆ.

ಮೈಸೂರು,<br>೧-೨-೧೯೩೭

ಎ. ಎನ್. ಮೂರ್ತಿರಾವ್

# ಗೌರಜ್ಜಿ

ಗೌರಜ್ಜಿ ನಮ್ಮ ತಂದೆಯ ದೊಡ್ಡಮ್ಮ. ಅವರ ಯೌವನದಲ್ಲಿ ನಾವು ಆಕೆಯನ್ನು ಕಾಣೆವು. ನಮಗ ಸ್ವಲ್ಪ ಬುದ್ಧಿ ತಿಳಿಯುವ ವೇಳೆಗೆ ಅವರಿಗ ಸುಮಾರು ಅರುವತ್ತೈದು ವರ್ಷವಿರಬಹುದು. ನಮ್ಮ ನರಸು ಒಂದು ದಿನ ಅವರನ್ನು "ಅಜ್ಜಿ, ನೀನೂ ಚಿಕ್ಕವಳಾಗಿದ್ದೆಯಾ?" ಎಂದು ಕೇಳಿದಳು. ಪಾಪ, ಜರೆಯಿಂದ ಕುಗ್ಗಿ ಉಪವಾಸಾದಿ ವ್ರತಗಳಿಂದ ಕೃಶವಾದ ಆ ದೇಹದಲ್ಲಿ ಹಿಂದೆ ಎಳೆತನದ ಲವಲವಿಕೆಯೂ ಯೌವನದ ಕಾಂತಿಯೂ ಇದ್ದುವೆಂದು ಮೂರು ವರ್ಷದ ಹುಡುಗಿಗೆ ಹೇಗೆ ತಿಳಿಯ ಬೇಕು? ಗೌರಜ್ಜಿ ಚಿಕ್ಕವರಾಗಿದ್ದಾಗ ಬಲು ಚೆಲುವೆಯಂತೆ. "ಹಳ್ಳಿಯ ಹೆಣ್ಣುಮಗಳಾದರೂ ಕೈತೊಳೆದುಕೊಂಡು ಮುಟ್ಟುವಹಾಗಿದ್ದರು; ತಲೆಯ ಕೂದಲಂತೂ ಮೊಣಕಾಲಿನವರೆಗೂ ಬರುತ್ತಿತ್ತಂತೆ" ಎಂದು ನಮ್ಮ ತಾಯಿ ಒಂದೊಂದು ದಿನ ಹೇಳುವುದುಂಟು. ಅವರ ತಂದೆಯ ಮನೆ ಯವರು ಅವರನ್ನು ಪ್ರಾಣಕ್ಕಿಂತಲೂ ಹೆಚ್ಚಾಗಿ ಸಾಕಿ ಒಳ್ಳೆಯ ಮನೆ ಯನ್ನು ನೋಡಿ ಮದುವೆಮಾಡಿಕೊಟ್ಟರು. ಆದರೆ ಗಂಡನೊಡನೆ ಬಹಳ ದಿನ ಸಂಸಾರ ಮಾಡಿಕೊಂಡಿರುವುದು ಆಕೆಯ ಹಣೆಯಲ್ಲಿ ಬರೆದಿರಲಿಲ್ಲ. ಅವರಿಗೆ ಇನ್ನೂ ಹದಿನೆಂಟು ವರ್ಷವಾಗಿರುವಾಗಲೇ ವೈಧವ್ಯ ಪ್ರಾಪ್ತ ವಾಯಿತು. ಗಂಡನ ಮನೆಯಲ್ಲಿ ಇದ್ದ ಮೂರು ವರ್ಷವೂ ಆಕೆಗೆ ಸುಖ ವಿಲ್ಲ. ಹಿಂದಿನ ಕಾಲದ ಅತ್ತೆಯರ ಯಜಮಾನಿಕೆಯ ವಿಚಾರ ಕೇಳಬೇಕೆ? ಅವರ ಮನೆಯಲ್ಲಿ ಎಲ್ಲಾ ವಿಷಯಗಳಲ್ಲೂ ಹಿಂದಿನ ಕಾಲದ ಪದ್ಧತಿ. ಸೊಸೆಯರು ಹಗಲು ಹೊತ್ತು ಸೂರ್ಯನಿಗೆ ಸಹ ಮುಖ ತೋರಿಸು ವುದಕ್ಕಿಲ್ಲ. ರಾತ್ರಿಯ ಅನ್ನವೇನಾದರೂ ಮಿಕ್ಕಿದ್ದರೆ ಮಕ್ಕಳನ್ನೂ—ಆ ಮನೆಯ ಮಕ್ಕಳೆಂದರೆ ಒಂದು ಚಿಕ್ಕ ಪದಾತಿ ಸೈನ್ಯವಾಗಬಹುದು—ಚಿಕ್ಕ ಸೊಸೆಯರನ್ನೂ ತೊಟ್ಟಿಯ ಅಂಚಿನಲ್ಲಿ ಕೂರಿಸಿ ಎಲ್ಲರಿಗೂ ಒಂದೊಂದು ತುತ್ತು ಹಾಕಿಬಿಡುತ್ತಿದ್ದರಂತೆ. ಅದಾದ ಮೇಲೆ ಹಗಲೆಲ್ಲಾ ಗಾಣದ ಎತ್ತಿನಂತೆ ದುಡಿದು ಮಧ್ಯಾಹ್ನ ಹಾಕಿದ ಬರಗೂಳನ್ನು ತಿಂದು ಕಾಲ

ಹಾಕಬೇಕು. ಅಪರೂಪವಾಗಿ ಒಂದೊಂದು ವೇಳೆ "ನಮ್ಮ ಗೌರಿಯೇ ವಾಸಿ, ರಥದ ಹಾಗೆ ಕೆಲಸಮಾಡುತ್ತಾಳೆ" ಎಂದು ಅತ್ತೆಯವರಿಂದ ಶಹಬಾಸುಗಿರಿ ಒರುವುದುಂಟು. ಆದರೆ ಸಾಮಾನ್ಯವಾಗಿ ಅವರ ಅತ್ತೆ ಸಿಡುಕು ಸ್ವಭಾವದವರು. ಸೊಸೆಯರು ದಿನಕ್ಕೊಂದು ಸಲವಾದರೂ ತಮಗೆ ಹೆದರಿ ನಡುಗಿ ಕಣ್ಣೀರು ಬಿಡದಿದ್ದರೆ ತಮ್ಮ ಯಜಮಾನಿಕೆ ಇದ್ದೇನು ಫಲ ಎನ್ನುವಂಥ ಹೆಂಗಸು. ಸೊಸೆ ಕುಳಿತಿದ್ದರೆ "ಕೂತು ಬಿಟ್ಟಳು, ಮೊಳೆ ಬಡಿಸಿಕೊಂಡ ಹಾಗೆ, ಕೆಲಸಕ್ಕೆ ನಾನು ಇದೀನಲ್ಲ, ಪರಿಚಾರಗಿತ್ತಿ" ಎನ್ನುವರು; ನಿಂತಿದ್ದರೆ "ನಿಂತಳು, ಕಂಬ ನಿಂತಹಾಗೆ, ದೇವರಿಗೆ ಹರಸಿಕೊಂಡಿದೀಯಾ, ನಿಲ್ಲುವ ಸೇವೆ ಮಾಡುತ್ತೇನೆ ಅಂತ" ಎನ್ನುವರು. ಗೌರಜ್ಜಿ ಆಗಾಗ ನಮಗೆ ಅವರ ಮನೆಯ ಕಥೆಯನ್ನೆಲ್ಲಾ ಹೇಳುವುದುಂಟು. ಅವರ ಮಾವನವರು ಊರಿನಲ್ಲಿ ಬಹಳ ಗಣ್ಯರಾದ ಮನುಷ್ಯರಂತೆ. ಮೆಂಬರು ನರಸಯ್ಯನವರೆಂದರೆ ಆ ತಾಲ್ಲೂಕಿನಲ್ಲೆಲ್ಲಾ ಪ್ರಸಿದ್ಧಿ. ಅಮಲ್ದಾರರು ಊರಿಗೆ ಬಂದರೆ ಅವರನ್ನು ಕರೆಯಿಸಿ ಹತ್ತಿರ ಕೂರಿಸಿಕೊಳ್ಳುತ್ತಿದ್ದರಂತೆ. ಅವರಿಗೆ ಐವತ್ತು ಅರುವತ್ತು ಎಕರೆ ತರಿ ಜಮೀನು, ತೋಟ, ಹೊಲ ಎಲ್ಲಾ ಇದ್ದುವು. ಒಂದೊಂದು ಸಲ ಕಬ್ಬು ಹಾಕಿದರೆ ಬಂದವರಿಗೆಲ್ಲಾ ಕಬ್ಬಿನ ಹಾಲು ಕೊಟ್ಟರೂ ವರ್ಷಗಾಲ ಮನೆಗೆ ಬೆಲ್ಲವಾಗುವುದಲ್ಲದೆ ಉಳಿದ ಬೆಲ್ಲವನ್ನು ಮಾರಿ ಒಳ್ಳೆಗಳಲ್ಲಿ ರೂಪಾಯಿ ತುಂಬಿ ತೊಲೆಯ ಮೇಲಿಡುತ್ತಿದ್ದರಂತೆ. ನರಸಯ್ಯನವರ ಮಾತೆಂದರೆ ಊರಿನಲ್ಲಿ ಸಿಂಹಾಜ್ಞೆ; ಅವರ ಅಪ್ಪಣೆಯಿಲ್ಲದೆ ಕಾಲುವೆಯ ಏರಿಯ ಮೇಲೆ ದನ ಬಿಡುವುದು ಹುಲ್ಲು ಕೊಯ್ಯುವುದು ಅಂದರೇನು! ಅವರು ಮೆಂಬರಾದ ಮೇಲೆ ಊರಿನ ಎಲ್ಲಾ ಹಕ್ಕೂ ಅವರಿಗೇ ಸೇರಿಹೋಯಿತೆಂದು ಆ ಹಳ್ಳಿಯವರು ಭಾವಿಸಿದರೋ ಏನೋ. ಗೌರಜ್ಜಿಗಂತೂ ಅದೇ ಸ್ಥಿರವಾದ ನಂಬಿಕೆ. ಇದರ ಮೇಲೆ ನರಸಯ್ಯನವರು ಅಮಲ್ದಾರರ ಹತ್ತಿರ ಸದರವಾಗಿ ಮಾತಾಡತಕ್ಕವರು! ಆ ಗತವೈಭವವನ್ನು ಹೇಳಿಕೊಳ್ಳಲು ಆಕೆಗೆ ಬಲು ಉತ್ಸಾಹ. ನಾವು ದೊಡ್ಡವರಾದ ಮೇಲೆ ಈ ಕಥೆಯನ್ನೆಲ್ಲಾ ಕೇಳಿ ಸ್ವಲ್ಪ ಹಾಸ್ಯಮಾಡಿದರೆ "ಹೋಗರೋ, ಈಗಿನ ಕಾಲದ ಹುಡುಗರೇ ಹೀಗೆ! ನಮ್ಮ ಕಾಲದಲ್ಲಿ ಹುಡುಗರು ಹೀಗೆಲ್ಲ ಲಲ್ಲೆ ಬಡಿದು

ಕೊಂಡು ನಗುವುದೆಂದರೇನು? ಸೀಳಿ ತೋರಣ ಕಟ್ಟಿಬಿಡುತ್ತಿದ್ದರು'' ಎನ್ನುವರು. ಅವರಿಗೆ ನಮ್ಮ ಮೇಲೆ ಕೋಪವೆಂದಲ್ಲ; ಹಿಂದಿನ ಕಾಲ ದವರು ಸಂಸಾರವೆಂದರೆ ಎಷ್ಟು ಕಟ್ಟುನಿಟ್ಟಿನಲ್ಲಿ ಇಟ್ಟಿದ್ದರೆಂಬುದನ್ನು ಹೇಳಿ ಕೊಳ್ಳಬೇಕೆಂದು ಆಸೆ. ಅವರು ಯಾವ ವಿಷಯವಾಗಿ ಮಾತಾಡು ತ್ತಿದ್ದರೂ ಹೇಗಾದರೂ ಮಾಡಿ ತಮ್ಮ ಮನೆಯವರ ದೊಡ್ಡಸ್ತಿಕೆಯ ಕಡೆಗೆ ಮಾತು ತಿರುಗಿಸಿಬಿಡುವರು. ತಮ್ಮ ಮಾವನವರ ಮನೆಯ ವಿಷಯ ವಾಗಿ ಅವರು ಹಾಸ್ಯಮಾಡಿ ನಕ್ಕದ್ದು ನನಗೆ ತಿಳಿದಮಟ್ಟಿಗೆ ಒಂದೇ ಒಂದು ಸಲ. ಅವರ ತಂದೆ ರಾಮಣ್ಣನವರು ಮಗಳನ್ನು ಗಂಡನ ಮನೆಗೆ ಬಿಟ್ಟು ಹೋಗುವುದಕ್ಕೆ ಬಂದಿದ್ದರಂತೆ. ನರಸಯ್ಯನವರು ಅಷ್ಟು ಅನುಕೂಲಸ್ಥ ರಾಗಿದ್ದರೂ ಊಟ ಉಪಚಾರಗಳ ವಿಷಯದಲ್ಲಿ ಅವರ ಕೈಹಿಡಿತ ಸ್ವಲ್ಪ ಹೆಚ್ಚಾಗಿಯೇ ಇದ್ದಿತೆಂದು ತೋರುತ್ತದೆ. ಅವರ ಮನೆಯಲ್ಲಿ ಸಾರು ಕಿಚ್ಚಿನ ಕಿಡಿ; ತುಪ್ಪದ ಕಲ್ಸರೆಯನ್ನು ಎಲ್ಲರೆದುರಿಗೂ ಒಂದು ಸಲ ಪ್ರದರ್ಶನ ಮಾಡಿ ತೆಗೆದುಕೊಂಡು ಹೋಗುವರು. ರಾಮಣ್ಣನವರ ಮನೆಯಲ್ಲಿ ಯಾವಾಗಲೂ ಕರಾವಿದ್ದು ಚೆನ್ನಾಗಿ ತುಪ್ಪ ಹಾಕಿಕೊಂಡು ಅವರಿಗೆ ಅಭ್ಯಾಸ; ಊಟಕ್ಕೆ ಕುಳಿತಿದ್ದಾಗ ಖಾರವನ್ನು ತಡೆಯಲಾರದೆ ಒಂದುಸಲ ಬಿಕ್ಕಳಿಸಿದರು. ಬೀಗರು ಅದನ್ನು ಕೇಳಿ ''ರಾಮಣ್ಣನವರಿಗೆ ಖಾರವೇನೋ, ನಿಹಿನೀರು ಬಡಿಸಿರೆ'' ಎಂದರಂತೆ. ಗೌರಜ್ಜಿ ಇದೊಂದು ಕಥೆಯನ್ನು ಮಾತ್ರ ಸ್ವಲ್ಪ ಹಾಸ್ಯಧ್ವನಿಯಿಂದ ಹೇಳುವರು. ಕೊನೆಗೆ ಅವರು ತಮ್ಮ ಅತ್ತೆಯ ಕಿರುಕುಳದ ವಿಷಯ ಹೇಳುವಾಗಲೂ, ಅವರ ಪಲುವಾಗಿ ನಮಗೆ ಕೋಪ ಬರುತ್ತಿತ್ತೇ ಹೊರತು ಆಕೆಯ ಮನಸ್ಸಿ ನಲ್ಲೇನೂ ಕೋಪವಿರುತ್ತಿರಲಿಲ್ಲ. ಅವರ ಅತ್ತೆಯ ವಿಷಯದಲ್ಲಿ ಆಕೆಗೆ ಒಂದು ವಿಧವಾದ ಮೆಚ್ಚಿಕೆಯೇ ಇದ್ದಂತೆ ತೋರುತ್ತದೆ. ಸಂಜೆಯ ಹೊಂಬಿಸಿಲಿನಲ್ಲಿ ದೂರದಲ್ಲಿರುವ ಗಿಡಮರಗಳಿಲ್ಲದ ಬರಿಯ ಕಲ್ಲುಬೆಟ್ಟಕ್ಕೂ ಚಿನ್ನದ ಮೆರುಗು ಬರುವುದು; ಹಾಗೆಯೇ ಜನಗಳಿಗೆ ವಯಸ್ಸಾದ ಮೇಲೆ ಹಿಂದಿನ ಕಾಲಕ್ಕೆ ಸಂಬಂಧಪಟ್ಟದ್ದೆಲ್ಲ ಒಂದು ಕಾಂತಿಯನ್ನು ತಳೆದಂತೆ ತೋರಬಹುದು. ಅಥವಾ ಬಹುಕಾಲ ಸಂಸಾರದ ಸುಖದುಃಖಗಳಲ್ಲಿ ನುರಿತು ಪರಿಪಕ್ವವಾದ ಅವರ ಹೃದಯಕ್ಕೆ ಮಾನವ ಮನೋಧರ್ಮದಲ್ಲಿ

ಇತರರಿಗೆ ಸಿಕ್ಕದ ಯಾವುದೋ ಒಂದು ಅಮೂಲ್ಯವಾದ ರಹಸ್ಯವು ಸಿಕ್ಕಿ, ಇತರರಿಗೆ ದೊಡ್ಡವಾಗಿ ಕಾಣುವ ಹುಳುಕುಗಳೆಲ್ಲ ಅವರಿಗೆ ಅತ್ಯಲ್ಪವಾಗಿ ತೋರುವುವೋ ಏನೋ. ಅಂತೂ ಗೌರಜ್ಜಿ ಹಿಂದಿನ ಕಾಲದವರ ಅವಗುಣ ಗಳನ್ನು ಹೇಳುವಾಗಲೂ ಅದೂ ಹೊಗಳಿಕೆಯ ಮಾತು ಎನ್ನುವಹಾಗೆಯೇ ಹೇಳಿಬಿಡುವರು.

ಗೌರಜ್ಜಿ ಆಗಾಗ ತಮ್ಮ ತೌರೂರಿನ ವಿಷಯವನ್ನೂ ಹೇಳು ವುದುಂಟು. ಅವರ ತೌರುಮನೆ ಹೊನ್ನಹಳ್ಳಿಯಲ್ಲಿ. ಅದು ಮಲೆನಾಡಿನ ಕಡೆಯ ಊರು. ಕೆರೆಯ ಕೆಳಗೆ ದೊಡ್ಡ ತೋಟಗಳು. ಅವರ ಮನೆ ಯವರು ಎರಡು ಎಕರೆ ತೋಟ ಮಾಡಿಕೊಂಡು ಅದರಲ್ಲಿ ಅನ್ನ ಬಟ್ಟೆ ಮೊದಲುಗೊಂಡು ದನದ ಮೇವಿನವರೆಗೂ ತಮ್ಮ ಸಂಸಾರವನ್ನೆಲ್ಲಾ ನಿರ್ವಹಿಸುತ್ತಿದ್ದರು. ತೋಟವೆಂದರೂ ನಂದನವನದ ಹಾಗಿರುವುದಂತೆ; ಮಧ್ಯಾಹ್ನ ಹನ್ನೆರಡು ಘಂಟೆಯಲ್ಲೂ ನೆಲದಮೇಲೆ ಬಿಸಿಲು ಬೀಳುತ್ತಿರಲಿಲ್ಲ. "ಎಲ್ಲಾ ಹಾಳು ಮಾಡಿಕೊಂಡುವು. . . . ಈಗಲೂ ಇದಾರೆ, ಹುಡುಗರು; ಇದ್ದರೇನು, ಲೆಕ್ಕಕ್ಕಿಲ್ಲ ಜಮೆಗಿಲ್ಲ" ಎಂದು ಗೌರಜ್ಜಿ ತಮ್ಮ ಅಣ್ಣನ ಮಕ್ಕಳ ಮೇಲೆ ಒಂದೊಂದು ವೇಳೆ ಕೋಪಿಸುವರು. ಆಕೆ ಚಿಕ್ಕ ಹುಡುಗಿಯಾಗಿದ್ದಾಗ ಅವರ ಅಣ್ಣ ತೋಟಕ್ಕೆ ಅಗೆಯುವುದಕ್ಕೆ ಹೋಗಿದ್ದರೆ ಅಲ್ಲಿಗೆ ತಿಂಡಿಯನ್ನು ತೆಗೆದುಕೊಂಡು ಹೋಗುತ್ತಿದ್ದರಂತೆ. ಆ ತೋಟದ ಸೊಬಗು, ಕಿತ್ತಿಳೆ ಮರಗಳಲ್ಲಿ ಕೆಂಪೇರುತ್ತಿದ್ದ ಕಾಯಿ, ಅಲ್ಲಲ್ಲಿಯೇ ಅಡಕೆಯ ಸೋಗಿನಲ್ಲಿ ಬಚ್ಚಿಟ್ಟಿರುತ್ತಿದ್ದ ಪರಂಗಿ ಮಾದಲ ಮುಂತಾದ ಹಣ್ಣು—ಇದರ ವಿಷಯವನ್ನೆಲ್ಲ ಕೇಳುತ್ತಿದ್ದರೆ ನಮಗೆ ಬಾಯಲ್ಲಿ ನೀರು ಊರುವುದು. ಮಲ್ಲಿಗೆಯ ಗಿಡಗಳಲ್ಲಿ ಬುಟ್ಟಿ ಬುಟ್ಟಿ ಮೊಗ್ಗು ಸಿಕ್ಕುತ್ತಿತ್ತಂತೆ. ಇದನ್ನು ಕೇಳಿದಾಗಲೆಲ್ಲ ನಮ್ಮ ಸರಸುವಿಗೆ ಹೊಟ್ಟೆಕಿಚ್ಚು.

ನಮ್ಮ ತಂದೆ ಅಲ್ಲಿದ್ದಾಗ ತೋಟಕ್ಕೆ ಹೋಗಿ ಬಲು ಹಾವಳಿ ಮಾಡುತ್ತಿದ್ದರಂತೆ. "ಬಲು ತುಂಟ ಕಣ್ರೋ, ನಿಮ್ಮಪ್ಪ" ಎಂದು ಕಥೆ ಪ್ರಾರಂಭವಾದೊಡನೆಯೆ ನಮ್ಮ ಕಿವಿ ನೆಟ್ಟಗಾಗುವುದು. ಈಗ ಲಕ್ಷಣ ವಾಗಿ ಸಭ್ಯರಂತೆ ಷರ್ಟ್ ಬಟ್ಟೆಯ ಸೂಟು ಹಾಕಿಕೊಂಡು ಆಫೀಸಿನಿಂದ

ಬಂದು ನಾವು ಗಲಾಟೆಮಾಡುತ್ತಿದ್ದರೆ ಮುಖ ಗಂಟುಹಾಕಿಕೊಂಡು "ಏನು ಘಾಂಧಲೆ ಮಾಡುತ್ತವಪ್ಪ ಇವು, ಮನೆ ಸಂತೆಯಾಗಿಹೋಯಿತು" ಎನ್ನುವವರನ್ನು ತುಂಟನೆಂದರೆ ನಮ್ಮ ಕಿವಿ ನೆಟ್ಟಗಾಗುವುದು ಹೆಚ್ಚೆ? ನಮ್ಮ ತಂದೆ ಮಠಕ್ಕೆ ಹೋಗುತ್ತೇನೆಂದು ಮನೆಯಿಂದ ಹೊರಟು ಊರಿನ ಹುಡುಗರು ಇಬ್ಬರು ಮೂವರನ್ನು ಕಟ್ಟಿಕೊಂಡು ಮನೆಯಿಂದ ಅಕ್ಕಿಯ ಹಿಟ್ಟನ್ನು ಕದ್ದು, ತೋಟದಲ್ಲಿ ತೆಂಗಿನಹಣ್ಣನ್ನು ಕೆಡವಿ, ತುಂಬ ಕಾಯಿ ಹಾಕಿ ರೊಟ್ಟಿಮಾಡಿ ಎಲ್ಲರೂ ತಿಂದು, ಮಠದಿಂದ ಹುಡುಗರು ಬರುವ ಹೊತ್ತಿಗೆ ಸರಿಯಾಗಿ ಮನೆಗೆ ಬರುತ್ತಿದ್ದರಂತೆ. ಒಂದು ದಿನ ಮನೆಯವರು ಬೇಡವೆಂದು ಹೇಳಿದ್ದರೂ ಕೆರೆಯಲ್ಲಿ ಈಜಾಡಿ, ಅಲ್ಲಿಂದ ಜೊತೆಯವರೊಡನೆ ತೋಟಕ್ಕೆ ಹೋಗಿ ಅಲ್ಲಿ ಕೋಡಬಳೆ ಮಾಡಬೇಕೆಂದು ಹವಣಿಸುತ್ತಿದ್ದಾಗ ಸಿಕ್ಕಿಕೊಂಡು ಚೆನ್ನಾಗಿ ಏಟನ್ನೂ ತಿಂದರಂತೆ. ನಾವು ತಿಂಡಿ ಕೇಳಿದರೆ "ಸದಾ ತಿಂಡಿಯ ಮೇಲೇ ಯೋಚನೆ, ಓದಿಲ್ಲ, ಬರಾವಿಲ್ಲ" ಎನ್ನುವ ನಮ್ಮ ತಂದೆ, ಗೌರಜ್ಜಿ ಈ ಕಥೆಯನ್ನೆಲ್ಲಾ ಹೇಳುತ್ತಿದ್ದರೆ ಕಥಾ ನಾಯಕರು ಒಂದು ವಿಧವಾದ ಜಾಣಕಿವುಡನ್ನು ಬರಮಾಡಿಕೊಂಡು ಗಂಭೀರವಾಗಿ ಏನೋ ಯೋಚನೆಮಾಡುವವರಂತೆ ಕುಳಿತಿರಲು ಯತ್ನಿಸು ವರು; ಅದು ಸಾಧ್ಯವಾಗದೆ ಕೊನೆಗೆ ಮುಖವನ್ನು ಕಂಪಗೆಮಾಡಿಕೊಂಡು ಸ್ವಲ್ಪ ನಕ್ಕು ಹೊರಟುಹೋಗುವರು. ಅವರ ಮುಖವನ್ನು ನೋಡಿದರೆ ತಮ್ಮ ಅಕೃತ್ಯಗಳಿಗಾಗಿ ಅವರು ಸ್ವಲ್ಪವೂ ಸಂತಾಪಪಟ್ಟಂತೆ ತೋರು ತ್ತಿರಲಿಲ್ಲ. ಹಿಂದಿನ ದಿನಗಳನ್ನು ಜ್ಞಾಪಿಸಿಕೊಂಡು ಬಹಳ ಸುಖವನ್ನು ಅನುಭವಿಸಿದಂತೆಯೇ ತೋರುತ್ತಿತ್ತು. ಆದರೆ ಹುಡುಗರೆದುರಿಗೆ ತಮ್ಮ ಈ ಚರಿತ್ರೆಯನ್ನೆಲ್ಲಾ ಹೇಳಿಬಿಟ್ಟರೆ ಮನೆಯಲ್ಲಿ ತಮ್ಮ ದರ್ಪ ಕಡಿಮೆಯಾಗ ಬಹುದೆಂದು ಸ್ವಲ್ಪ ಅಸಮಾಧಾನವಾಗುತ್ತಿತ್ತೋ ಏನೋ.

ಗೌರಜ್ಜಿ ಮನೆಯಲ್ಲಿದ್ದಾಗ ಹುಡುಗರ ಸಹಾಯಕ್ಕೆ ಒಂದು ದೊಡ್ಡ ಸೈನ್ಯವಿದ್ದ ಹಾಗೆ. ನಾವೇನಾದರೂ ರಂಪುಮಾಡುತ್ತಿದ್ದಾಗ ನಮ್ಮ ತಾಯಿ "ಮನೆಗೆ ಬರಲಿ ಆಗುತ್ತೆ, ಬೆನ್ನಿಗೆ ಎಣ್ಣೆ ಸವರಿಕೊಂಡಿರಿ" ಎಂದರೆ ನಾವು ಅಜ್ಜಿಗೆ ಹೋಗಿ ಚಾಡಿಹೇಳಿಬಿಡುತ್ತಿದ್ದೆವು. ನಮ್ಮ ಸರಸುವಿಗೂ ಈ ಗುಟ್ಟು ತಿಳಿದುಹೋಗಿತ್ತು. ಏನಾದರೂ ಮೊಂಡತನ ಮಾಡಿದಾಗ

ನಮ್ಮ ತಂದೆ ಸ್ವಲ್ಪ ಬೆನ್ನು ಬೆಚ್ಚಗೆಮಾಡಿದರೆ ಸಾಕು, ಅಜ್ಜಿಯ ಕಿವಿಗೆ ಕೇಳುವಹಾಗೆ ಅತ್ತುಬಿಡುತ್ತಿದ್ದಳು. ಆಕೆ ಬಂದಮೇಲೆ ನಮ್ಮ ತಂದೆ ಒಂದು ಮಾತು ಹಾಕುವುದಕ್ಕೂ ಅವಕಾಶವಾಗುತ್ತಿರಲಿಲ್ಲ. "ರತ್ನದಂಥ ಮಗು, ಏನೋ ಚೇಷ್ಟೆ ಮಾಡಿದರೆ ಹೀಗೆ ಹೊಡೆಯುವುದೆ? ಮಕ್ಕಳಲ್ಲದೆ ದೊಡ್ಡವರು ಚೇಷ್ಟೆಮಾಡುತ್ತಾರೆಯೆ? (ಈ ತರ್ಕಕ್ಕೆ ಯಾರು ತಾನೆ ಉತ್ತರಕೊಟ್ಟಾರು!) ನಿಮ್ಮಂಥವರಿಗೆ ಮಕ್ಕಳನ್ನೇಕೆ ಕೊಟ್ಟನೋ ಕಣ್ಣಿಲ್ಲದ ದೇವರು! ನೀನು ಹುಟ್ಟುವಾಗಲೇ ಬುದ್ಧಿ ತಿಳಿದು ಹುಟ್ಟಿದೆ ಅಲ್ಲವೆ!" ಸರಿ, ನಮ್ಮ ತಂದೆ ಚಿಕ್ಕವರಾಗಿದ್ದಾಗ ಮಾಡುತ್ತಿದ್ದ ಹಾವಳಿಯ ವರ್ಣನೆಯೆಲ್ಲಾ ಬರುವ ವೇಳೆಗೆ ಅವರು ಪಲಾಯನವಾಗಿ ಹೋಗಬೇಕು, ಇಲ್ಲವೆ ಕೋಪವಿಳಿದು ನಗುತ್ತ ಕುಳಿತುಕೊಳ್ಳಬೇಕು.

ಮಕ್ಕಳೆಂದರೆ ಗೌರಜ್ಜಿಗೆ ಪ್ರಾಣ. ರಾತ್ರಿ ಹುಡುಗರನ್ನೆಲ್ಲಾ ಮಲಗಿಸಿ ಅವರಿಗೆ ಕಥೆ ಹೇಳುವರು. "ದೊರೆ ಮಗ ಮಂತ್ರಿ ಮಗ ಇಬ್ಬರೂ ಹೀಗೆ ಮಾತಾಡುತ್ತಾ ಇದ್ದಾಗ ಮರದ ಮೇಲೆ ಗಂಡಭೇರುಂಡ ಪಕ್ಷಿಗಳು ಅವರ ಮಾತು ಕೇಳುತ್ತಾ ಇದ್ದುವು" ಎಂದು ಕಥೆ ಮುಂದು ವರಿಯುತ್ತಿದ್ದರೆ ಹುಡುಗರು ಹೂಗುಟ್ಟುತ್ತಾ ಹಾಗೆಯೇ ನಿದ್ರೆ ಹೋಗು ವರು. ನಮ್ಮ ಹೂಗುಟ್ಟುವಿಕೆ ನಿಂತ ಎಷ್ಟೋ ಹೊತ್ತಿನವರೆಗೂ ಕಥೆ ಮುಂದಕ್ಕೆ ಸಾಗುತ್ತಲೇ ಇರುವುದು. ಎಷ್ಟೋ ದಿನ ನನಗೆ ರಾಜಪುತ್ರನು ಎಣ್ಣೆಯ ಕೊಪ್ಪರಿಗೆಯಲ್ಲಿ ನಾಗವಲ್ಲಿಯ ಮುಖವನ್ನು ನೋಡುವ ಸಮಯಕ್ಕೆ ಎಚ್ಚರವಾಗುತ್ತಿತ್ತು.

ಹಬ್ಬಗಳು ಬಂದುವೆಂದರೆ ನಮಗೆಲ್ಲಾ ಆಗದು. ಬೆಳಗ್ಗೆ ತಿಂಡಿಯಿಲ್ಲ ತೀರ್ಥವಿಲ್ಲ; ಸ್ನಾನಮಾಡಿ ವಿಭೂತಿ ಇಟ್ಟುಕೊಂಡು ದೇವರ ಮುಂದೆ ಕುಳಿತಿರುವುದೆಂದರೆ ಮಕ್ಕಳಿಗೆ ಜೈಲಿಗೆ ಹಾಕಿದಂತೆಯೇ. ಒಳಕ್ಕೆ ಹೋದರೆ ಮಡಿ ಕೆಟ್ಟುಹೋಗುವುದೆಂದು ಹಾರಾಟ, ಬೀದಿಗೆ ಹೋಗುವುದಕ್ಕೆ ಅಪ್ಪಣೆಯಿಲ್ಲ. ಗಟ್ಟಿಯಾಗಿ ನಕ್ಕು ಕುಣಿದಾಡುತ್ತಿದ್ದರೆ ದೇವರ ಪೂಜೆಗೆ ಮನಸ್ಸೇ ನಿಲ್ಲುವುದಿಲ್ಲವೆಂದು ಕೋಪಮಾಡುವರು. ಸಾಲದ ಕಡಿಮೆಗೆ ಹೊಟ್ಟೆ ಹಸಿವು ಬೇರೆ—ಅಥವಾ ಹಸಿವಿಲ್ಲದಿದ್ದರೂ ತಿಂಡಿಯಮೇಲಿನ ಆಸೆ. ಅಂತೂ ಹಬ್ಬಗಳು ಬಂದರೆ ಮಕ್ಕಳಪಾಡು ಬೇಡ, ಬೋನಿನಲ್ಲಿಟ್ಟ ಹುಲಿಯ

ಹಾಗೆ ಇಲ್ಲಿಂದ ಅಲ್ಲಿಗೆ ಪರದಾಡುವುವು. ಇಂಥ ಕಾಲದಲ್ಲಿ ಗೌರಜ್ಜಿಯೇ ನಮಗೆ ಶರಣು. ಅವರು ಹಿಂದಿನ ಕಾಲದವರಾಗಿ ವ್ರತನಿಯಮಗಳು ಬಹಳ ಹೆಚ್ಚಾದರೂ ಮಕ್ಕಳ ಮೇಲಿನ ಪ್ರೇಮ ಅದಕ್ಕಿಂತಲೂ ಹೆಚ್ಚು. ಹುಡುಗರ ಪಾಡನ್ನು ನೋಡಿ ತಮ್ಮ ಮೋಕ್ಷವನ್ನೂ ಮರೆತು ದೇವರ ಪಕ್ಷವನ್ನು ಬಿಟ್ಟು ನಮ್ಮ ಪಕ್ಷವನ್ನು ವಹಿಸುವರು. "ಪಾಪ, ಮಕ್ಕಳು ದೇವರ ಹಾಗೆ. ಹಬ್ಬ ಅಂದರೆ ಅವಕ್ಕೆ ಹತಹತ. ಅದೇನು ಹಾಗೆ ಅಟ್ಟಿಕೊಳ್ಳುತ್ತೀರಿರೆ? ಅವಕ್ಕೇನು, ಉಪವಾಸದ ಕಟ್ಟು? ಏನಾದರೂ ಕೊಟ್ಟುಬಿಡಬಾರದೆ?" ಎಂದು ನಮ್ಮನ್ನು ಕರೆದುಕೊಂಡು ಹೋಗಿ ಅವಲಕ್ಕಿ ಬೆಲ್ಲವೋ, ಅರಳೋ ಏನಾದರೂ ಕೊಟ್ಟು ಕಳುಹಿಸುವರು. ಅವರ ಶಾಸ್ತ್ರದ ಪ್ರಕಾರ ಐದು ವರ್ಷದ ಒಳಗಿನ ಮಕ್ಕಳೆಲ್ಲಾ ದೇವರ ಹಾಗೆ. ಐದು ವರ್ಷಕ್ಕೆ ಮೀರಿದವರು ನಾವು ಕೆಲವರಿದ್ದರೂ ನಮ್ಮಲ್ಲಿಯೂ ದೇವತ್ವವನ್ನಾರೋಪಿಸಿ ನಮಗೂ ತಿಂಡಿ ಕೊಟ್ಟುಬಿಡುವರು. ನಮ್ಮ ತಾಯಿ ಇದನ್ನೆಲ್ಲಾ ನೋಡಿ ಸ್ವಲ್ಪ ಅಸಮಾಧಾನಪಟ್ಟುಕೊಂಡು "ಹಬ್ಬ ಅನ್ನುವುದಿಲ್ಲ, ಹರಿದಿನ ಅನ್ನುವುದಿಲ್ಲ, ಹೊಟ್ಟೆಯ ಆತುರ ಬಂದಿದೆ ಇವಕ್ಕೆ" ಎನ್ನುವರು. ನಮ್ಮ ಜೇಬಿನಲ್ಲಿ ಅವಲಕ್ಕಿ ಇರುವವರೆಗೂ ಅವರು ಎಷ್ಟು ರೇಗಿದರೇನು!

ಚಿಕ್ಕಂದಿನಲ್ಲೇ ವೈಧವ್ಯ ಪ್ರಾಪ್ತವಾಗಿ ಮಕ್ಕಳೂ ಇಲ್ಲದೆ ಇರುವವರಿಗೆ ಹೃದಯವು ಕಲ್ಲಾಗಿ ಹೋಗುವುದೆಂದು ನಮ್ಮವರು ಹೇಳುವುದುಂಟು. ಅದು ನಿಜವಿದ್ದರೂ ಇರಬಹುದು. ಅಂಥವರು ತಾವು ಹಸಿದು ಪ್ರಾಣಬಿಡುತ್ತಿರುವಾಗ ಇತರರು ಮೃಷ್ಟಾನ್ನ ಭೋಜನ ಮಾಡುವುದನ್ನು ನೋಡುತ್ತಿರಬೇಕು. ಪತಿಪ್ರೇಮರಹಿತರಾಗಿ, ಎಳೆಯ ಮಕ್ಕಳನ್ನು ಲಾಲಿಸಿ ಅವುಗಳ ಆಟವನ್ನು ನೋಡಿ ಹಿಗ್ಗುವ ಭಾಗ್ಯವಿಲ್ಲದೆ, ಇತರರು ಬೆಳಕಿನಲ್ಲಿರುವಾಗ ತಮ್ಮ ಭಾಗಕ್ಕೆ ಪ್ರಪಂಚವೆಲ್ಲ ಅಂಧಕಾರಮಯವೆಂದು ತಿಳಿದು ನೊಂದುಕೊಳ್ಳುತ್ತ, ಹೆರರ ಸೌಖ್ಯಕ್ಕಾಗಿ ದುಡಿದು ದುಡಿದು ಜೀವವನ್ನು ತೇಯುವವರಿಗೆ ಹೃದಯ ಕಲ್ಲಾಗುವುದೇನೂ ಹೆಚ್ಚಲ್ಲ. ಸ್ತ್ರೀಯರಿಗೆ ಮಾತೃಪ್ರೇಮವು ಉಕ್ಕಿ ಬರುವಾಗ ಅದಕ್ಕೆ ಒಂದು ಆಶ್ರಯವಿಲ್ಲದಿದ್ದರೆ ಅದೇ ಒಂದು ಕಾಠಿನ್ಯವಾಗಿ ಪರಿಣಮಿಸುವುದು. ಪ್ರೇಮಲತೆ ತನಗೆ

ತಾನೇ ಹಬ್ಬಲಾರದು. ಅದಕ್ಕೆ ಅನುಕೂಲವಾದ ಆಶ್ರಯವೊಂದು ಸಿಕ್ಕದಿದ್ದರೆ ಲತೆ ಒಣಗಿಹೋಗುವುದು ಹಾಗಿರಲಿ, ಅದರ ಸ್ಥಳದಲ್ಲಿ ವಿಷಮೂಲಿಕೆಯೊಂದು ಉತ್ಪನ್ನವಾಗಬಹುದು. ಗೌರಜ್ಜಿಗೆ ಮಕ್ಕಳಿಲ್ಲ. ಆದರೂ ಚಿಕ್ಕವಯಸ್ಸಿನಿಂದಲೂ ಸಮೀಪ ಬಂಧುಗಳ ಮಕ್ಕಳನ್ನು ಸಾಕಿ ಸಲಹಿದ್ದುದರಿಂದ ಇಂಥ ಆಶ್ರಯ ಅವರಿಗೆ ದೊರೆತಿತ್ತು. ಅವರ ಸ್ವಭಾವದಲ್ಲಿ ಕಾಠಿಣ್ಯಕ್ಕೆ ಬದಲಾಗಿ ಅಪೂರ್ವವಾದ ಒಂದು ಮಾರ್ದವವು ತೋರಿ ಬರುತ್ತಿತ್ತು. ತಮ್ಮ ದುಃಖವನ್ನು ಹೇಗೆ ಅಡಗಿಸಿಕೊಂಡರೋ, ಬಂಧುಗಳು ನಿರ್ಲಕ್ಷ್ಯವಾಗಿ ಅಸಡ್ಡೆಯಾಗಿ ಎಸೆದ ವಾಗ್ಬಾಣಗಳ ವೇದನೆಯನ್ನು ಹೇಗೆ ಸಹಿಸಿದರೋ—ಒಂದು ದಿನವಾದರೂ ಅವರು ಆ ವಿಷಯದ ಮಾತೆತ್ತಿದವರಲ್ಲ. ತಮ್ಮ ಕಣ್ಣೆದುರಿಗೆ ಬೆಳೆದವರು ಸುಖವಾಗಿರುವುದನ್ನು ನೋಡಿ ಆನಂದಪಟ್ಟುಕೊಂಡು ಇದ್ದುಬಿಡುವರು. ಆದರೂ ಕೊನೆಕೊನೆಗೆ ಅವರ ಮನಸ್ಸಿನಲ್ಲಿ ಒಂದು ವಿಧವಾದ ಚಲಚಿತ್ತತೆ ತೋರುತ್ತಿತ್ತು. ನಾಲ್ಕು ದಿನ ನಮ್ಮ ಮನೆಯಲ್ಲಿರುವರು, ನಾಲ್ಕು ದಿನ ತಮ್ಮ ಭಾವಮೈದುನಂದಿರ ಮಕ್ಕಳ ಮನೆಗೋ ಅಣ್ಣನ ಮಕ್ಕಳ ಮನೆಗೋ ಹೋಗುವರು. ಒಂದು ಕಡೆ ಬಹಳ ದಿನ ನಿಲ್ಲಲಾರರು. ಎಲ್ಲಿ ಹೋದರೂ ಅವರನ್ನು ಆದರದಿಂದ ಬರಮಾಡಿಕೊಳ್ಳುವರು. ಎಲ್ಲರೂ ತಮ್ಮನ್ನು ಗೌರವಿಸುವರೆಂದೂ ಆದರಿಸುವರೆಂದೂ ಆಕೆಗೆ ನಂಬಿಕೆಯಿದ್ದರೂ, ನಮ್ಮೆಲ್ಲರಲ್ಲಿಯೂ ಅತ್ಯಧಿಕವಾದ ಪ್ರೇಮವನ್ನಿಟ್ಟಿದ್ದರೂ ತಾವು ಲೋಕದಲ್ಲಿ ಒಬ್ಬೊಂಟಿಗರೆಂಬ ಭಾವ ಅವರ ಮನಸ್ಸಿಗೆ ಆಗಾಗ ಬರುತ್ತಿತ್ತೋ ಏನೊ. ಯಾರಿದ್ದರೇನು, ಎಷ್ಟು ಹತ್ತಿರದ ಸಂಬಂಧವಾದರೇನು, ಎಷ್ಟು ಆದರದಿಂದ ಕಂಡರೇನು, ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳಿದ್ದಹಾಗಾಯಿತೆ!

———

# ಹಗಲುಗನಸುಗಳು

ನಾನು ಬಹಳ ಚಿಕ್ಕವನಾಗಿದ್ದಾಗ ನನ್ನ ಸ್ನೇಹಿತರೊಬ್ಬರು 'ಅರೇಬಿಯನ್ ನೈಟ್ಸ್' ಪುಸ್ತಕವನ್ನು ಕೈಯಲ್ಲಿಟ್ಟರು. ಆ ಪುಸ್ತಕವು ನನಗೆ ಒಂದು ಬಗೆಯ ಹುಚ್ಚು ಹಿಡಿಸಿಬಿಟ್ಟಿತು. ಊಟವಾದಮೇಲೆ ಹಾಸಿಗೆಯ ಮೇಲೆ ಮಲಗಿ ಷೆಹರಜಾದಳ ಕಥೆಗಳನ್ನು ಓದಲಾರಂಭಿಸಿದರೆ, ಮೈಸೂರಿನಲ್ಲಿ ಯಾವುದೋ ಧೂಳು ತುಂಬಿದ ಸಣ್ಣ ಬೀದಿಯಲ್ಲಿ ವಾಸ ವಾಗಿರುವುದು ಮರೆತುಹೋಗಿ ನಾನು ಬಾಗ್ದಾದ್ ಪಟ್ಟಣದಲ್ಲಿ ಹರೌನ್ ಆಲ್ ರಷೀದನ ಕಾಲದವನಾಗಿ ಹೋಗುತ್ತಿದ್ದೆನು. ಆ ಪುರಾತನ ನಗರಕ್ಕೆ ನಾನೇನೂ ಹೊಸಬನಲ್ಲ, ಅಲ್ಲಿಯೇ ಹುಟ್ಟಿ ಬೆಳೆದವನು, ಎಂದೇ ತೋರು ತ್ತಿತ್ತು. ಅಲ್ಲಿಯ ರಾಜಬೀದಿಯ ಪಕ್ಕದಲ್ಲಿ ನನ್ನದೂ ಒಂದು ಅರಮನೆ; ಪ್ರತಿದಿನವೂ ನಗರಪರೀಕ್ಷೆಗಾಗಿ ಕಲೀಫನೂ ಜಾಫರನೂ ವೇಷವನ್ನು ಮರೆಸಿಕೊಂಡು ನಮ್ಮ ಮನೆಯ ಮುಂದೆಯೇ ಹೋಗುವರು; ಸಿಂದಬಾದನಂಥ ವರ್ತಕರು ದೂರದ ದ್ವೀಪಗಳಿಂದ ತಂದ ವಸ್ತ್ರಗಳು, ರತ್ನಗಳು, ದಂತ, ಶ್ರೀಗಂಧದ ಸಾಮಾನು, ಮುಂತಾದ ಸರಕುಗಳನ್ನು ಕೂಲಿಯವರಿಂದ ಹೊರಿಸಿಕೊಂಡು ತಮ್ಮ ಮನೆಗಳಿಗೆ ಹೋಗುತ್ತಿರುವರು; ಮಸೀದಿಯ ಗೋಪುರದಿಂದ ಜನರನ್ನು ದೇವರ ಸ್ತೋತ್ರಕ್ಕೆ ಎಚ್ಚರಿಸುವ ಕೂಗು ಕೇಳಿಬರುವುದು; ಶ್ರೀಮಂತರ ಮನೆಗಳ ಕಿಟಕಿಗಳಿಗೆ ಮುಚ್ಚಿರುವ ತೆಳ್ಳನೆಯ ಮಸಲಿನ್ ಪರದೆಯನ್ನು ಭೇದಿಸಿಕೊಂಡು ಆಗಾಗ ರಮಣಿಯರ ಕಣ್ಣ ನೋಟವು ಹೊಳೆಯುವುದು. ಒಟ್ಟಿನಲ್ಲಿ ಇಪ್ಪತ್ತನೆಯ ಶತಮಾನದ ನಿಸ್ಸಾರವಾದ ನಾಗರಿಕತೆಯ ಆವರಣವು ಅಳಿದುಹೋಗಿ, ಕಲ್ಪನೆಯ ಬಣ್ಣ ಗಳಿಂದ ಕೂಡಿ ಮನೋಹರವಾದ ಆ ಹಳೆಯ ಕಾಲದ ಜೀವನವು ಪುನಃ ನನ್ನ ಕಣ್ಣಮುಂದೆ ಚಿತ್ರಿತವಾಗುತ್ತಿತ್ತು. ಆಗಲೇ ನಾನು ಹಗಲುಗನಸಿನ ಪ್ರಪಂಚಕ್ಕೆ ಕಾಲಿಟ್ಟದ್ದು. ಈ ಪ್ರಪಂಚದ ಪರಿಚಯವಾದ ಮೇಲೆ ನನ್ನ ಸ್ವಭಾವವೇ ಮಾರ್ಪಟ್ಟು ನಿತ್ಯದ ಜೀವನಕ್ಕೂ ನನ್ನ ಜೀವನಕ್ಕೂ ನಡುವೆ ಒಂದು ದೊಡ್ಡ ಕಮರಿ ಬಂದಂತಾಯಿತು. ಆ ಕಾಲದಲ್ಲಿ ನಾನು ಆಳದ

ರಾಜ್ಯವಿಲ್ಲ, ಮಾಡದ ಸಾಹಸವಿಲ್ಲ, ಅನುಭವಿಸದ ಸೌಖ್ಯವಿಲ್ಲ. ನನ್ನ ಹೃದಯದ ಬಯಕೆಗಳಿಗನುಸಾರವಾಗಿ ಬೇರೆ ಒಂದು ಲೋಕವನ್ನೇ ಸೃಷ್ಟಿ ಸಿದ್ದೆನು. ಹೀಗೆ ಹಗಲುಗನಸುಗಳನ್ನು ಕಾಣುತ್ತ ಕಳೆದ ದಿನಗಳು ಬಹು ಸುಖಮಯವಾದುವೆಂದು ಈಗಲೂ ತೋರುತ್ತದೆ.

ನಿಜವಾಗಿಯೂ ಪ್ರಪಂಚದಲ್ಲಿ ಸುಖಿಗಳೆಂದರೆ ಹಗಲುಗನಸು ಕಾಣು ವವರು. ಲಕ್ಷ್ಮಿಯ ಕಟಾಕ್ಷವು ಎಷ್ಟು ಚಂಚಲವಾಗಿರಲಿ, ವಿಧಿಯ ಹೊಡೆತವು ಎಷ್ಟು ಕ್ರೂರವಾಗಿರಲಿ, ಅದೆಲ್ಲವನ್ನೂ ಮರೆತು, ಪ್ರತಿಭೆಯ ಶಕ್ತಿಯಿಂದ ರಮಣೀಯವಾದ ಪ್ರಪಂಚವೊಂದನ್ನು ನಿರ್ಮಿಸಿಕೊಂಡು ಪ್ರಪಂಚದ ಕಷ್ಟನಿಷ್ಠುರಗಳಿಗೆ ಸಿಕ್ಕಿಯೂ ಸಿಕ್ಕದಂತೆ ಇರಬಲ್ಲರು. ಈ ಕನಸುಗಳು ಎಲ್ಲರಿಗೂ ಬರುವುದಿಲ್ಲ. ಅದಕ್ಕೆ ನಮ್ಮ ಹೊರಗಿನ ಕಾರ್ಯ ಕ್ಷೇತ್ರವನ್ನು ಮರೆತು ಭಾವನಾಪ್ರಪಂಚದಲ್ಲಿಯೇ ಜೀವಿಸುವ ಮನೋಭಾವ ಬೇಕು. ಅನುಕೂಲವಾದ ಮನೋಭಾವವೊಂದಿದ್ದರೆ ಅವು ಕಾಲ ದೇಶ ನಿಯಮವಿಲ್ಲದೆ ತಂಡತಂಡವಾಗಿ ಹೊರಡುವುವು; ಅದರಲ್ಲಿಯೂ ಸಂಜೆಯ ಹೊತ್ತಿನಲ್ಲಿ ಪ್ರಕೃತಿಯ ಸೌಂದರ್ಯವನ್ನು ಅನುಭವಿಸುತ್ತಿರುವಾಗ, ಅಥವಾ ಹಳೆಯ ನೆನಪುಗಳಿಗೆ ಅವಕಾಶಕೊಟ್ಟಾಗ, ಅವುಗಳ ಬೆಳೆ ಹೆಚ್ಚು. ಈ ಕನಸು ಗಳಿಗೆ ನಮ್ಮ ಮನಸ್ಸಿನಲ್ಲಿ ನೆಲೆ ಸಿಕ್ಕಿದಹಾಗೆಲ್ಲಾ ನಮ್ಮ ಕಣ್ಣೆದುರಿಗಿರುವ ಸ್ಪಷ್ಟವಾದ ಸ್ಥೂಲಪ್ರಪಂಚದ ಜ್ಞಾನವು ಅಳಿದುಹೋಗಿ ನಮ್ಮ ಯೋಚನೆ ಗಳೆಲ್ಲಾ ಬೇರೊಂದು ರಾಜ್ಯದಲ್ಲಿ ಸಂಚರಿಸತೊಡಗುವುವು. ಕೆಲವರಲ್ಲಿ ಈ ಮನೋರಾಜ್ಯವು ಬಹು ಬೇಗ ನಾಶಹೊಂದಿ ಮತ್ತೆ ಸ್ಥೂಲ ಪ್ರಪಂಚದ ಅರಿವು ಮನಸ್ಸಿನಲ್ಲಿ ತುಂಬಿಕೊಳ್ಳುತ್ತದೆ. ಇನ್ನು ಕೆಲವರು ಮುದುಕರಾದ ಮೇಲೂ ಕನಸಿನ ಕಡಲಿನಿಂದ ಪಾರಾಗಿ ದಡವನ್ನು ಸೇರುವುದಿಲ್ಲ.

ನಾನು ಷೆಹರಜಾದಳ ಕಥೆಗಳನ್ನು ಓದುವುದಕ್ಕೆ ಮೊದಲಿನ ಪ್ರಪಂಚದ ಅನುಭವ ಈಗಲೂ ನೆನಪಿದೆ. ಅದು ಎಂದಿನಂತೆ ಊಟ ಉಪಚಾರಗಳುಳ್ಳ, ತಂದೆತಾಯಿಯರ ಬೈಗಳುಳ್ಳ, ಶಾಲೆಯ ಭೂಗೋಳ ಚರಿತ್ರೆಗಳುಳ್ಳ, ಅಸಹ್ಯವಾದ ವೇಳಾಪಟ್ಟಿಯ ಪ್ರಪಂಚ. ನೂತನ ಸಂಘಟನೆಯೊಂದಿಲ್ಲ, ಒಂದು ಅದ್ಭುತವಿಲ್ಲ, ವಿಚಿತ್ರ ವ್ಯಾಪಾರವಿಲ್ಲ— ಕಾರ್ಯಕಾರಣ ನಿಯಮಕ್ಕೆ ದಾಸ್ಯವೃತ್ತಿ ಮಾಡುವ ಪ್ರಪಂಚ; ಮೋಡ

ಕವಿದಿರುವ ಮಳೆಗಾಲದ ದುರ್ದಿನದಂತೆ ಜುಗುಪ್ಸೆಯುಂಟುಮಾಡುತ್ತಿತ್ತು. ಅನಂತರ ನೋಡಿದರೆ, ಹಿಂದಿನ ಆ ವರ್ಣರಹಿತ ಪ್ರಪಂಚವು ಅದೃಶ್ಯವಾಗಿದೆ. ಬೆಟ್ಟಗಳು ಸುಂದರವಾದ ನೀಲಿಯನ್ನು ತಳೆದಿವೆ; ಪಕ್ಷಿಗಳ ಗಾನದ ಇಂಪು ಹೆಚ್ಚಿದೆ; ಹೂವುಗಳ ಸೌಂದರ್ಯ ನೂರುಮಡಿಯಾಗಿದೆ. ಈಗಿನ ಜಗತ್ತು ವಿವಿಧ ವರ್ಣಮಯ, ಸೌಂದರ್ಯಮಯ. ಜೀವನವು ಯಾವುದೋ ದಿವ್ಯ ಗಾನದ ಲಯವನ್ನನುಸರಿಸಿ ನರ್ತಿಸುತ್ತಿದೆ. ಪ್ರಪಂಚದ ಎಲ್ಲೆಗಳು ನಾಶವಾಗಿ ದೇಶವು ಅನಂತವಾಗಿದೆ; ವರ್ಣನೆಗೆ, ಅಳತೆಗೆ, ಅರಿವಿಗೆ ಸಿಕ್ಕದಂತೆ ಮಿತಿಯಿಲ್ಲದ ವೈವಿಧ್ಯವುಳ್ಳದ್ದಾಗಿದೆ. ಜೊತೆಗೆ ನಮ್ಮ ಶಕ್ತಿಯ ಎಲ್ಲೆಗಳೂ ನಾಶವಾಗಿ ಅದು ಸರ್ವತೋಮುಖವಾಗಿ ಬೆಳೆಯುತ್ತ ಬಂದಿದೆ. ಜಗತ್ತು ಅಪಾರವಾದದ್ದಾದರೂ, ಭಯಂಕರವಾದ ಅರಣ್ಯಗಳನ್ನೂ ತೀರವಿಲ್ಲದ ಸಾಗರಗಳನ್ನೂ ಉಳ್ಳದ್ದಾದರೂ ಈಗ ದೂರವೆಂಬುದಿಲ್ಲ. ಒಂದು ಷಿರಾಸ್ ಕಂಬಳಿಯ ಮೇಲೆ ಕುಳಿತು ಮನಸ್ಸು ಮಾಡಿದರೆ ಕ್ಷಣಮಾತ್ರದಲ್ಲಿ ಸಹಸ್ರ ಯೋಜನಗಳನ್ನು ದಾಟಬಹುದು. ಈಗ ಪ್ರಪಂಚದಲ್ಲಿ ಬಡತನವಿಲ್ಲ—ಇದ್ದರೂ ಅಲ್ಲಾವುದೀನನ ಮಾಯಾದೀಪದ ಸಹಾಯದಿಂದ ಕರಗಿಹೋಗುವುದು. ಕುರೂಪಿಗಳೂ ವೃದ್ಧರೂ ಇಲ್ಲ—ಇದ್ದರೂ ತರುಣ ತರುಣಿಯರ ವಶಕ್ಕೆ ಸಿಕ್ಕಿ ತಮ್ಮ ಅಷ್ಟೈಶ್ವರ್ಯವನ್ನೂ ಅವರಿಗೆ ಧಾರೆಯೆರೆದು ಹೊರಟುಹೋಗುವರು. ಅವರಿರುವುದರಿಂದ ನಮ್ಮ ಕನಸಿನ ಲೋಕದ ಸೌಂದರ್ಯಕ್ಕೆ ಕೊರತೆಯಿಲ್ಲ. ಒಂದೊಂದು ವೇಳೆ ನಿರ್ಮಲವಾದ ಆಕಾಶದಲ್ಲಿ ಎಲ್ಲಿಂದಲೋ ಬಿಳಿಮುಗಿಲು ಬಂದು ಸ್ವಲ್ಪ ನೆರಳುಹಾಕಿ ಮತ್ತೆ ಮರೆಯಾಗುವುದು. ಆ ಮೋಡದಿಂದ ಆಕಾಶದ ಸೌಂದರ್ಯ ಕುಂದುವುದಕ್ಕೆ ಬದಲು ಹೆಚ್ಚುವುದು. ನಮ್ಮ ನೂತನ ಪ್ರಪಂಚದಲ್ಲಿ ಬಡತನವೂ ಕುರೂಪಿಗಳೂ ವೃದ್ಧರೂ ಇರುವುದು ಹಾಗೆಯೇ. ಅವರ ಇರವು ಬೇಗ ಮರೆಯಾಗುವ ಮಾಯೆಯ ಮುಸುಕು. ಪ್ರಪಂಚದಲ್ಲಿ ಎಲ್ಲೆಲ್ಲಿಯೂ ಸೌಂದರ್ಯಲಹರಿಯು ಉಕ್ಕಿ ಹರಿಯುತ್ತಲಿದೆ, ದಿವ್ಯ ಗಾನದ ಆನಂದವು ತುಂಬ ಪರವಶತೆಯುಂಟುಮಾಡಿದೆ. ಒಂದೊಂದು ವೇಳೆ ದುಃಖ ಸ್ವರವೂ ಕೇಳಿಬರುವುದುಂಟು: ಅಲ್ಲಿ—ಆ ಕಾಡಿನ ಮಧ್ಯದಿಂದ ಎದ್ದು ಕಾಣುವ ಅರಮನೆಯಿಂದ ದುಷ್ಟರ ಕೈಗೆ ಸಿಕ್ಕಿಬಿದ್ದಿರುವ ಯಾವಳೋ

ಸುಂದರಿಯ ಆರ್ತಸ್ವರವು ಕೇಳುತ್ತಿದೆ. ಅದೂ ನಮ್ಮ ಕಿವಿಗೆ ಗಾನವೇ— ನಮ್ಮನ್ನು ಸಾಹಸಕಾರ್ಯಕ್ಕೆ ಹುರಿದುಂಬಿಸುವ ವೀರಗಾನ.

ಹಿಂದೆ ಲೋಕವನ್ನು ಬಂಧಿಸಿದ್ದ ಕಾರ್ಯಕಾರಣ ನಿಯಮವು ಹಾರಿಹೋಯಿತು. ಈಗ ಎಲ್ಲೆಲ್ಲಿಯೂ ಪ್ರಕೃತಿ ನಿಯಮಗಳನ್ನು ಲೀಲಾಜಾಲವಾಗಿ ಮೀರಬಲ್ಲ ಶಕ್ತಿವಿಶೇಷಗಳು ತುಂಬಿರುವುವು. ನಾವು ಇಷ್ಟಪಟ್ಟರೆ ಅವುಗಳ ಸಹಾಯದಿಂದ ಪರ್ವತಗಳನ್ನು ಚೂರ್ಣಮಾಡಬಹುದು, ಸಾಗರವನ್ನು ಶೋಷಿಸಬಹುದು. ಈಗ ನಿಯಮವಿಲ್ಲದಿರುವುದರಿಂದ ಅಸ್ಥಿರವಾಗಿರುವ ಪ್ರಪಂಚವನ್ನು ನಮ್ಮ ಮನಸ್ಸಿಗೆ ಮೆಚ್ಚುವಂತೆ ನಾವು ಕ್ರಮಕ್ಕೆ ತರಬಹುದು. ನಾವು ಸರ್ವಶಕ್ತರು; ಸೃಷ್ಟಿ ಸ್ಥಿತಿ ಲಯಗಳು ನಮ್ಮ ಕೈಯಲ್ಲಿವೆ. ಈಗ ಪರ್ವತಮಾಲೆಯಾಗಿರುವುದು ನಮ್ಮ ಮಾಯಾದಂಡವನ್ನು ಬೀಸಿದರೆ ವಿಶಾಲವಾದ ಸರೋವರವಾಗುವುದು; ಈಗ ನಮ್ಮಂತೆಯೇ ಜೀವ ತುಂಬಿ ತುಳುಕುತ್ತಿರುವ ಮನುಷ್ಯನಾಗಿರುವವನು ಉತ್ತರಕ್ಷಣದಲ್ಲಿ ಶಿಲಾಪ್ರತಿಮೆಯಾಗುವನು. ನಮ್ಮ ಕಲ್ಪಿತ ಪ್ರಪಂಚದಲ್ಲಿ ಎಲ್ಲೆಲ್ಲಿಯೂ—ಬೆಟ್ಟದ ಅಡಿಯಲ್ಲಿ, ಸರೋವರದ ತಳದಲ್ಲಿ, ಗೊಂಡಾರಣ್ಯದ ನಡುವೆ,—ವನದೇವಿಯರೂ ಯಕ್ಷ ಕಿನ್ನರರೂ ತಮ್ಮದೇ ಒಂದು ರಾಜ್ಯವನ್ನಾಳುತ್ತಾರೆ. ಎಂಥ ರಾಜ್ಯ! ಅಲ್ಲಿ ಮಳೆಯಿಲ್ಲ, ಚಳಿಯಿಲ್ಲ, ಸೆಕೆಯಿಲ್ಲ, ಎಂದೆಂದಿಗೂ ಮುಗಿಯದ ವಸಂತಋತು. ಯಾವಾಗಲೂ ಮರಗಳು ಚಿಗುರಿರುವುವು, ಹೂವುಗಳು ಅರಳಿರುವುವು. ಅಲ್ಲಿ ಬೀದಿಗಳಿಗೆ ಚಿನ್ನದ ಇಟ್ಟಿಗೆಗಳನ್ನು ಹಾಸಿರುವರು; ವಜ್ರ ವೈಡೂರ್ಯಗಳ ಕಾಂತಿಯಿಂದ ಕಣ್ಣು ಕೋರೈಸಿ ಹೋಗುವುದು; ಆ ಕಾಂತಿಯನ್ನು ಹಳಿಯುವ ರಮಣಿಯರ ಕಣ್ಣ ನೋಟದಿಂದ ಹೃದಯವು ಸೆರೆಯಾಗುವುದು. ಈ ಯಕ್ಷಕನ್ಯೆಯರು ಒಂದೊಂದು ವೇಳೆ ವಿಹಾರಕ್ಕಾಗಿ ಭೂಮಿಗೆ ಒಂದು ಮಾನವನ ಸೌಂದರ್ಯಕ್ಕೆ ಮನಸೋತು ಅವನನ್ನು ತಮ್ಮ ಲೋಕಕ್ಕೆ ಸೆಳೆದುಕೊಂಡು ಹೋಗುವರು....ಎಷ್ಟು ಸುಖಮಯವಾದ ಕಾಲ!

ಈ ರಮ್ಯವಾದ ಪ್ರಪಂಚವೆಲ್ಲ ತರುಣರಿಗಾಗಿ ನಿರ್ಮಿತವಾದದ್ದು. ನಾವು ಜಯಿಸಿ ವಶಪಡಿಸಿಕೊಳ್ಳಲೆಂದು ಚಕ್ರಾಧಿಪತ್ಯಗಳು ಕಾದಿವೆ. ನಮ್ಮನ್ನು ವರಿಸಲು ಅಪ್ಸರೆಯರನ್ನು ಮೀರಿಸುವ ರಮಣಿಯರು ಮಾಲೆ

ಹಿಡಿದು ನಿಂತಿದ್ದಾರೆ. ಆದರೆ ಕೈ ಚಾಚಿದರೆ ಸಿಕ್ಕುವವರಲ್ಲ; ನಮ್ಮ ಕನಸು ಅಷ್ಟು ಬೇಗ ಮುಗಿಯದು. ಸೌಖ್ಯವು ಅಷ್ಟು ಸುಲಭಸಾಧ್ಯವಾದರೆ ನಮ್ಮ ಶೌರ್ಯ ಪ್ರದರ್ಶನಕ್ಕೆ ದಾರಿಯೆಲ್ಲಿಯದು? ನಾವು ಸಾಧಾರಣ ಜನರಂತೆ ಬರಿಯ ಫಲಾಪೇಕ್ಷಿಗಳಲ್ಲ, ಸಾಹಸಿಗಳು. ಫಲಾನುಭವಕ್ಕಿಂತ ಫಲಸಾಧನೆಯಲ್ಲಿ, ಅಜೇಯವಾದದ್ದನ್ನು ಜಯಿಸುವುದರಲ್ಲಿ ನಮಗೆ ಆಸಕ್ತಿ ಹೆಚ್ಚು. ಆ ಚಕ್ರಾಧಿಪತ್ಯವೂ, ಆ ಸುರಸುಂದರಿಯರೂ ದೊರೆಯಬೇಕಾದರೆ ಸಾಹಸಕಾರ್ಯಗಳನ್ನು ಮಾಡಬೇಕು. ಆದರೇನು? ಸಪ್ತಸಮುದ್ರಗಳನ್ನು ದಾಟುವುದಾಗಲಿ, ಅಭೇದ್ಯವಾದ ದುರ್ಗಗಳನ್ನು ಪ್ರವೇಶಿಸುವುದಾಗಲಿ, ಪಕ್ಷಿಗಳು ಸಹ ಕಾಣಲಾರದ ಪರ್ವತಶಿಖರಗಳನ್ನು ಮುಟ್ಟುವುದಾಗಲಿ, ನೂರು ತಲೆಯ ರಾಕ್ಷಸರನ್ನು ಕೊಲ್ಲುವುದಾಗಲಿ, ನಮಗೆ ಅಸಾಧ್ಯವಾದದ್ದೇನಿದೆ? ನಮ್ಮ ಶಕ್ತಿಯು ಕುಂದಿಲ್ಲದ್ದು; ನಮಗೆ ಜರೆಯೆಂದರೆ ನಂಬಿಕೆಯಿಲ್ಲ, ಮೃತ್ಯುವೆಂದರೆ ಅಪಹಾಸ್ಯ. ನಮ್ಮಿಂದ ಲೋಕದ ದುರ್ಜನರಿಗೆ ಮೃತ್ಯು, ನಮಗೆಲ್ಲಿಯದು?

ಈ ಮನೋವೃತ್ತಿಯು ಬಹಳ ದಿನ ಇರುವುದಿಲ್ಲ; ಇರುವವರೆಗೆ ವಿಚ್ಛಿತ್ತಿಯಿಲ್ಲದೆ ಇರುತ್ತದೆಂದೂ ಹೇಳಲಾಗುವುದಿಲ್ಲ. ಹೊರಗಿನ ಪ್ರತ್ಯಕ್ಷ ಪ್ರಪಂಚವು—ಕಲ್ಲಿನಂತೆ ಕಠಿನವಾದ, ಮನಸ್ಸಿನ ಮೋಸಗಳನ್ನೂ ಭಾವನೆಯ ಗಾರುಡಿಯನ್ನೂ ಒಲ್ಲದ ಪ್ರತ್ಯಕ್ಷ ಪ್ರಪಂಚವು—ನಮ್ಮ ಆನಂದವನ್ನೂ ಪರವಶತೆಯನ್ನೂ ಸಹಿಸಲಾರದು. ತನ್ನನ್ನು ಮರೆತು ಕಾರ್ಯಕಾರಣ ನಿಯಮದ ಎಲ್ಲೆಯನ್ನು ದಾಟಿ ಯಾವುದೋ ಗಂಧರ್ವನಗರವನ್ನು ಸೇರಿದ ನಮ್ಮಮೇಲೆ ಮತ್ಸರವಿಟ್ಟುಕೊಂಡು ಸಮಯವನ್ನು ಕಾಯುತ್ತಲೇ ಇರುವುದು. ಚಿಕ್ಕಂದಿನಲ್ಲಿ ನಾನು ನಮ್ಮ ಊರಿನ ನದಿಯ ತೀರದಲ್ಲಿರುವ ಹೊಂಗೆಯ ಮರವನ್ನೇರಿ, ನಾವು ಕುರ್ಚಿಯ ಕೊಂಬೆಯೆಂದು ಹೆಸರಿಟ್ಟಿದ್ದ ಕೊಂಬೆಯ ಮೇಲೆ ಕುಳಿತು ಬಹಳ ಕಾಲವನ್ನು ಕಳೆಯುವ ಪದ್ಧತಿ. ಅಲ್ಲ ಕುಳಿತು, ದೂರದಲ್ಲಿರುವ ಮರಳು ದಿಬ್ಬಗಳು, ನದಿಯ ಪ್ರವಾಹ, ಸುತ್ತ ಬಯಲಿನ ಪೈರಿನ ಮೇಲೆ ಬಿಸಿಲು ಬಿದ್ದಿರುವುದು, ಇದನ್ನೆಲ್ಲ ನೋಡುತ್ತ ಹಾಗೆಯೇ ಮಲಗಿದ್ದರೆ ಎಲ್ಲೋ ಕಾಲುವಾಸಿ ನಿದ್ದೆ ಬಂದಂತಾಗುತ್ತದೆ. ಸ್ವಲ್ಪ ಕನಸಿನಲ್ಲಿ ನೋಡಿದಂತೆ, ಕೇಳಿದಂತೆ,

ಸುತ್ತಿನ ದೃಶ್ಯದ ಮತ್ತು ನದಿಯ ಮೊರೆತದ ಅನುಭವವಾಗುತ್ತದೆ. ಮೊದಲು ಮೊದಲು ಅಸ್ಪಷ್ಟ ಭಾವಗಳು ಒಂದರ ಮೇಲೊಂದು ತೆರೆತೆರೆಯಾಗಿ ಎದ್ದು ಪಾರವಿಲ್ಲದ ಕನಸಿನ ಕಡಲಿನಲ್ಲಿ ಸೇರಿಹೋಗುವುವು. ಸ್ವಲ್ಪ ಹೊತ್ತಿನ ಮೇಲೆ ಆ ಭಾವಗಳು ರೂಪುಗೊಂಡು ಘಳಿಗೆಗೊಂದು ಸನ್ನಿವೇಶಕ್ಕೆ ನಮ್ಮನ್ನು ಒಯ್ಯುವುವು. . . . ಪಾತಾಳಲೋಕದಲ್ಲಿ ಪೆರಿಬಸೂವಿನ ಅರಮನೆ; ಅಲ್ಲಿ ರತ್ನರಾಜಿತವಾದ ಪೀಠದಲ್ಲಿರುವ ರಮಣಿಯು ನನ್ನನ್ನು ಕಂಡೊಡನೆ ಎದ್ದು ನಗೆಮಲ್ಲಿಗೆಯನ್ನು ಚೆಲ್ಲುತ್ತ ಕೈಹಿಡಿದು ಕೂರಿಸಿಕೊಳ್ಳುವಳು. . . . . . . ಹಾಗೆಯೇ ದೃಶ್ಯ ಬದಲಾಯಿಸುವುದು. ಯುವನರಾಜನೊಬ್ಬನ ಉಪವನಕ್ಕೆ ನಾನು ಅದೃಶ್ಯ ಕವಚವನ್ನು ಧರಿಸಿ ಪ್ರವೇಶಿಸಿರುವೆನು; ಅಲ್ಲಿ ಹನ್ನೆರಡು ಜನ ರಾಜಪುತ್ರಿಯರು ನೃತ್ಯ ವಿನೋದಗಳಲ್ಲಿ ಕಾಲ ಕಳೆಯುತ್ತಿರುವರು; ಅವರಲ್ಲಿ ಕಿರಿಯವಳನ್ನು ಒಲಿಸಿ ಮದುವೆಯಾಗುವೆನು. . . . . ಗಂಡಭೇರುಂಡ ಪಕ್ಷಿಯ ಮೇಲೆ ಕುಳಿತು ಸಮುದ್ರವನ್ನು ದಾಟಿ, ನಾಗವಲ್ಲಿಯ ಅಂತಃಪುರವನ್ನು ಪ್ರವೇಶಿಸಿ ಅಲ್ಲಿ ಎಣ್ಣೆಯ ಕೊಪ್ಪರಿಗೆಯಲ್ಲಿ ಆ ಸುಂದರಿಯ ಪ್ರತಿಬಿಂಬವನ್ನು ನೋಡುವೆನು . . . . ಋಷಿದತ್ತವಾದ ಚಂದ್ರಹಾಸವೆಂಬ ಕತ್ತಿಯನ್ನು ಹಿಡಿದು ಆ ರಾಜಪುತ್ರಿಯನ್ನು ಸೆರಹಿಡಿದಿರುವ ರಾಕ್ಷಸನನ್ನು ಕೊಲ್ಲುವೆನು. . . . . ಠಾಕೂರರ 'ಹಸಿದಕಲ್ಲು'ಗಳ ಸೋಪಾನದಿಂದಿಳಿದು ಅವಲ್ಲಿ ಬೆಟ್ಟಗಳ ನಡುವೆ ಪ್ರವಹಿಸುವ ನದಿಯಲ್ಲಿ ಯವನ ಸುಂದರಿಯರೊಡನೆ ಜಲಕೇಳಿಯಾಡುವೆನು—ಹೀಗೆ ನನ್ನನ್ನು ನಾನೇ ಮರೆತಿದ್ದು ಮನೆಗೆ ಹೋದರೆ ವಾಸ್ತವ ಪ್ರಪಂಚವು ಕ್ರುದ್ಧನಾದ ತಂದೆಯ ರೂಪವನ್ನು ತಾಳಿ ನನ್ನಮೇಲೆ ಸೇಡು ತೀರಿಸಿಕೊಳ್ಳಲು ಕಾದಿರುತ್ತದೆ. ಆದರೆ ನನ್ನ ಮನಸ್ಸಿನಲ್ಲಿ ಕಟ್ಟಿಕೊಂಡಿರುವ ಕೋಟೆಯನ್ನು ಅದು ಲಗ್ಗೆ ಹತ್ತಿ ಅದರ ಕೊತ್ತಲಗಳ ಮೇಲೆ ಧ್ವಜವನ್ನು ಮೆರೆಯಿಸಲಾರದು. ಅದರ ಹೊಡೆತವು ಕ್ಷಣಿಕವಾದುದು. ಗಗನಕ್ಕೆ ಏರುತ್ತಿರುವ ನನ್ನ ರೆಕ್ಕೆಗಳು ಒಂದು ಘಳಿಗೆನೊಂದು ನಾನು ಭೂಮಿಗೆ ಇಳಿಯಬೇಕಾಗಬಹುದು; ಆದರೆ ಉತ್ತರ ಕ್ಷಣದಲ್ಲಿಯೇ ಮತ್ತಷ್ಟು ವೇಗವಾಗಿ ನನ್ನ ಯಕ್ಷನಗರಕ್ಕೆ ಹೋಗಿ ಸೇರಿಕೊಳ್ಳುವೆನು.

ಆಗ ಓದಿದ ಕಥೆಗಳ ಸನ್ನಿವೇಶಗಳೂ ಚಿತ್ರಗಳೂ ಕಣ್ಣಮುಂದೆ ಪಂಕ್ತಿ ಪಂಕ್ತಿಯಾಗಿ ಹೋದಂತೆ ಈಗಲೂ ಅನೇಕ ವೇಳೆ ಅನುಭವ ವಾಗುತ್ತದೆ. ಕಥೆಗಾರನು ತಿರಸ್ಕಾರದಿಂದ ಮನಸ್ಸಿಗೆ ತಂದುಕೊಳ್ಳದೆ ಬಿಟ್ಟ ಅತ್ಯಲ್ಪವಾದ ಅಂಶಗಳೆಲ್ಲಾ ನನ್ನ ಮನಸ್ಸಿಗೆ ಹೊಳೆಯುತ್ತಿದ್ದುವು. ಅಲ್ಲಾವುದೀನನು ಮಾಯಾದೀಪವನ್ನು ತರಲು ಹೋದ ಆ ಪಾತಾಳದ ವನವು ಎಷ್ಟು ಸುಂದರವಾಗಿದ್ದಿತೋ! ಅಲ್ಲಿ ಎಲೆಗಳೆಲ್ಲವೂ ಪಚ್ಚೆಗಳು, ಹಣ್ಣುಗಳೆಲ್ಲವೂ ವಜ್ರ ವೈಡೂರ್ಯಗಳು. ಆ ರತ್ನಗಳ ಜೊತೆಗೆ ಹಸಿವನ್ನು ಅಣಗಿಸಬಲ್ಲ ಸಾಧಾರಣವಾದ ಹಣ್ಣುಗಳೂ ಇದ್ದಿದ್ದರೆ ಅಲ್ಲಾವುದೀನನು ಹೊರಗೆ ಬರಲು ಕಾತರನಾಗದೆ ಅಲ್ಲಿಯೇ ವಿಹರಿಸುತ್ತಿರಬಹುದಾಗಿತ್ತು. ....ಆದರೆ ಹಾಗಿದ್ದಿದ್ದರೆ ಅವನಿಗೆ ಆ ಉಂಗುರದ ಮತ್ತು ದೀಪದ ಶಕ್ತಿಯು ಗೋಚರಕ್ಕೇ ಬರುತ್ತಿರಲಿಲ್ಲವೇನೋ! ಅಲ್ಲದೆ ಚೀನಾದೇಶದ ರಾಜಪುತ್ರಿಯನ್ನು ಮದುವೆಯಾಗುವ ಸಂಭವವೂ ಇರುತ್ತಿರಲಿಲ್ಲ..... ಆ ಕಥೆಯನ್ನು ಬರೆದವನಿಗೆ ಕಲಾದೃಷ್ಟಿ ಕಡಿಮೆ; ಉಂಗುರದ ಭೂತಕ್ಕಿಂತ ಹಳೆಯ ಮಸಿಯ ದೀಪದ ಭೂತಕ್ಕೆ ಹೆಚ್ಚು ಶಕ್ತಿಯನ್ನು ಕೊಡುವುದುಂಟೆ! ಉಂಗುರದ ಭೂತವನ್ನೇ ದೊಡ್ಡದನ್ನಾಗಿ ಮಾಡಿದ್ದರೆ ಕಲಾದೃಷ್ಟಿಯಿಂದ ಮಾತ್ರವೇ ಅಲ್ಲದೆ ಅನುಕೂಲತೆಯ ದೃಷ್ಟಿಯಿಂದಲೂ ಕಥೆ ಉತ್ತಮ ವಾಗುತ್ತಿತ್ತು....ಭೂತಗಳ ಸಹಾಯ ತನಗಿರುವುದನ್ನು ತಿಳಿದೂ ನಾಲ್ಕು ಬೆಳ್ಳಿಯ ತಟ್ಟೆಗಳನ್ನು ಮಾರಿಕೊಂಡು ಜೀವಿಸುತ್ತಿದ್ದ ಅಲ್ಲಾವುದೀನನು ತಾನೇ ಎಂಥ ಮರುಳ!......ನಾನಾಗಿದ್ದರೆ ದೊರೆಯ ಮಗಳನ್ನು ಯಾಚಿಸಲು ತಾಯಿಯನ್ನು ಆಸ್ಥಾನಕ್ಕೆ ಕಳುಹಿಸಿ, ನಲವತ್ತು ದಿನ ಗಣನೆಗೇ ಬಾರದೆ ಬಾಗಿಲಿನಲ್ಲಿ ಭಿಕ್ಷುಕಳಂತೆ ನಿಲ್ಲುವ ಅವಮಾನಕ್ಕೆ ಆಕೆಯನ್ನು ಎಂದಿಗೂ ಗುರಿಮಾಡುತ್ತಿರಲಿಲ್ಲ. ದೀಪದ ಅದ್ಭುತ ಶಕ್ತಿಯು ನಮ್ಮ ವಶವಾಗಿರುವಾಗ ಬಬ್ಬರ ಹಂಗೇನು? ಭೂಮಂಡಲವೆಲ್ಲಕ್ಕೂ ಏಕಚ್ಛತ್ರಾಧಿಪತಿಯಾಗಬಹುದು, ಇತ್ಯಾದಿ, ಇತ್ಯಾದಿ.

ಇವೆಲ್ಲಾ ಹುಡುಗತನದ ಕನಸುಗಳು. ಆದರೆ ನನ್ನ ಹುಡುಗತನವು ಬಹಳ ದಿನ ನಡೆದಿರಬೇಕು. ಹದಿನೇಳು ಹದಿನೆಂಟು ವರ್ಷವಾದ ಮೇಲೂ ಮಾಯಾದೀಪವು ನಿಶ್ಚಯವಾಗಿ ಇರುವ ವಸ್ತುವೆಂದೇ ನನ್ನ ನಂಬಿಕೆ.

ತಿದು ಎಲ್ಲಿರುವುದೋ, ಯಾರಿಗೆ ಸಿಕ್ಕುವುದೋ! ಅಂತೂ ಇಲ್ಲವೆಂದು ಹೇಳುವುದು ಹೇಗೆ? ನನ್ನ ಕಲ್ಪನಾ ಪ್ರಪಂಚವು ಸತ್ಯವೆನ್ನುವುದರಲ್ಲಿ ನನಗೆ ಲೇಶಮಾತ್ರವೂ ಸಂಶಯವಿರಲಿಲ್ಲ. ಅದು ಎಲ್ಲಿರುವುದೋ ಆ ರಹಸ್ಯ ವನ್ನು ಮಾತ್ರ ಭೇದಿಸಲಾದರೆ! ಅಗೋ, ದೂರದಲ್ಲಿ ಸಂಜೆಯ ರಾಗವನ್ನು ತಳೆದು ಮೇಘ ವಿರಚಿತ ದುರ್ಗವೊಂದು ಕಾಣುತ್ತಿದೆ; ಅದರ ಒಂದು ಭಾಗ ದಲ್ಲಿ ಎತ್ತರವಾದ ಭುವನೇಶ್ವರಿ; ದುರ್ಗದ ತಪ್ಪಲನ್ನು ತೊಳೆಯುವಂತೆ ವಿಸ್ತಾರವಾದ ಸರೋವರ—ಆ ಮೇಘ ಚಿತ್ರವು ನನ್ನ ಗಂಧರ್ವನಗರಿಯ ಪ್ರತಿಬಿಂಬವೇಕಿರಬಾರದು? ಅಲ್ಲೆಲ್ಲಿಯೋ ಆ ಮೋಡಗಳ ಹಿಂದೆ, ಅಂತರಿಕ್ಷದ ನೀಲದ ಆಳದಲ್ಲಿ ನನ್ನ ಕನಸಿನ ಲೋಕ ಅಡಗಿದೆ. ನಾವು ಮನಸ್ಸಿನ ಕಲ್ಪನೆ ಮಾತ್ರವೆಂದು ಭಾವಿಸುವ ಆ ಮನೋಹರ ಜೀವನವು ಈಗಲೂ ವಿಶ್ವದಲ್ಲಿ ಎಲ್ಲೋ ಒಂದು ಕಡೆ ಸಾಗುತ್ತಿದೆ. ಮಲೆನಾಡಿನ ಕಣಿವೆಗಳಲ್ಲಿ ದಟ್ಟವಾದ ಕಾಡುಗಳ ನಡುವೆ ನದಿಯ ತೀರದ ಮರಳ ಮೇಲೆ ಬೆಳುದಿಂಗಳ ರಾತ್ರಿಯಲ್ಲಿ ವನದೇವಿಯರು ಈಗಲೂ ನರ್ತಿಸುವರು. ಅಷ್ಟೇಕೆ, ನಮ್ಮ ಊರಿನ ಬೆಟ್ಟದ ಗರ್ಭದಲ್ಲಿ, ಕೊಪ್ಪರಿಗೆ ಮಡುವಿನ ಅಡಿಯಲ್ಲಿ, ಏನು ರಹಸ್ಯ ವಿರುವುದೋ ಯಾರು ಬಲ್ಲರು! ನಾನು ಹೊಳೆಗೆ ಈಜುವುದಕ್ಕೆ ಹೋದಾಗಲೆಲ್ಲಾ ಮಡುವಿನ ಮಧ್ಯದಲ್ಲಿ ಮುಳುಗದೆ ಬರುತ್ತಿರಲಿಲ್ಲ. ಅದರ ಉದ್ದೇಶವೇನೆಂದು ಯಾರಿಗೂ ಹೇಳದಿದ್ದರೂ ನನ್ನ ಮನಸ್ಸಿನ ಅಂತರಾಳದಲ್ಲಿ ವಿಚಾರಶಕ್ತಿಗೆ ಗೋಚರವಾಗಿಯೋ ಆಗದಂತೆಯೋ ಕಿರು ದನಿಯೊಂದು "ಆ ಕಥೆಗಳ ಯಕ್ಷ ಪ್ರಪಂಚವು ಲಯವಾಗಿ ಹೋಗಿಲ್ಲ, ಅದನ್ನು ನಾಶಮಾಡುವ ಪ್ರಳಯವಿನ್ನೂ ಬಂದಿಲ್ಲ; ಮತ್ತೆ ಅದನ್ನು ಪ್ರವೇಶಿಸುವ ಭಾಗ್ಯ ನಿನ್ನದೇ ಯಾಕಾಗಿರಬಾರದು?" ಎಂದು ಹೇಳು ತ್ತಿತ್ತು. "ನನ್ನದೇ ಯಾಕಾಗಿರಬೇಕು?" ಎಂದು ನಾನು ಯಾವಾಗಲೂ ಕೇಳಿಕೊಂಡವನಲ್ಲ. ಒಂದೊಂದು ವೇಳೆ ನಡುಹಗಲಿನಲ್ಲಿ ಕನಸನ್ನು ಒಡೆದು ಆ ಪ್ರಶ್ನೆ ಬಂದರೂ ಅದಕ್ಕೆ ಕಿವಿಗೊಡುತ್ತಿರಲಿಲ್ಲ.

ಹಗಲುಗನಸುಗಳ ಸ್ವರೂಪ ನಮಗೆ ವಯಸ್ಸಾದ ಹಾಗೆಲ್ಲಾ ವ್ಯತ್ಯಾಸ ಹೊಂದುತ್ತಾ ಹೋಗುತ್ತದೆ. ಚಿಕ್ಕ ವಯಸ್ಸಿನಲ್ಲಿ ಸುಮ್ಮನೆ ಗೆಳೆಯರೊಡನೆ ಅಲೆದಾಡುವ ಆಸೆ. ಸ್ವಲ್ಪ ದೊಡ್ಡವರಾದ ಮೇಲೆ ಸಾಹಸ

ಕಾರ್ಯಗಳನ್ನು ಮಾಡಿ ಕೀರ್ತಿಪಡೆಯಬೇಕೆಂಬ ಆಸೆ. ಮತ್ತೆ ಸ್ವಲ್ಪ ಕಾಲ ಹೋದರೆ ಕನಸಿನ ಜೀವನದಲ್ಲಿ ನಮ್ಮ ಪ್ರಣಯಿನಿಯೊಬ್ಬಳ ಜೀವನ ಬೆರೆಯುತ್ತದೆ. ಇವೆಲ್ಲವೂ ಹೆಚ್ಚು ಕಡಿಮೆ ಮಾನವನ ಸಾಮಾನ್ಯ ಜೀವನಕ್ಕೆ ಸಂಬಂಧಪಡದ, ಸಾಹಸ ಪ್ರೇಮಗಳಿಂದ ಪೂರ್ಣವಾದ 'ರೊಮಾನ್ಸ್' ಪ್ರಪಂಚದ ಕನಸುಗಳು. ಇಪ್ಪತ್ತು ವರ್ಷ ಕಳೆದ ಮೇಲೆ ನಮ್ಮ ಬಯಕೆಗಳು ಸ್ವಲ್ಪಮಟ್ಟಿಗೆ ಭೂಮಿಗಿಳಿದು ಬರುವುವು. ಆಗಲೂ ದಿನ ದಿನದ ಜೀವನಕ್ಕೂ ನಮ್ಮ ಬಯಕೆಗಳಿಗೂ ಅಳೆಯಲಾರದಷ್ಟು ಅಂತರವಿರಬಹುದು. ಆದರೆ ಆಗಿನ ಕನಸುಗಳು ಪ್ರಕೃತಿ ನಿಯಮಗಳನ್ನು ಮೊದಲಿನಷ್ಟು ಉಲ್ಲಂಘಿಸುವುದಿಲ್ಲ. ಮೊದಲು ರಾಜರಾಗಿದ್ದವರು ಪಾಳೆಯ ಗಾರರಾಗುವೆವು. ಪಾಳೆಯಗಾರರಾಗಿದ್ದವರು ದೊಡ್ಡ ಜಮೀನುದಾರ ರಾಗುವೆವು. ಈ ಕಾಲದ ಕನಸುಗಳೂ ನೆನಪಿಗೆ ತಂದುಕೊಂಡರೆ ಬಹು ರಮ್ಯವಾಗಿರುವುವು.

ನಮ್ಮ ಊರಿಗೆ ಸ್ವಲ್ಪ ದೂರದಲ್ಲಿ ಹೇಮಾವತಿಯು ಕವಲೊಡೆದು ಮಧ್ಯೆ ಒಂದು ದ್ವೀಪವಾಗಿದೆ. ಅದನ್ನು ಹೊಸ ಪಟ್ಟಣವೆಂದು ಕರೆ ಯುತ್ತಾರೆ. ಹಿಂದೆ ಹೈದರಾಲಿಯು ಅದನ್ನು ರಾಜಧಾನಿಯಾಗಿ ಮಾಡಿ ಕೊಳ್ಳಬೇಕೆಂದು ಅಲ್ಲಿ ಭಾರಿಯ ಕೋಟೆಯನ್ನು ಕಟ್ಟಿದನಂತೆ. ಅನಂತರ ಅಲ್ಲಿಗೆ ನಾಲ್ಕೈದು ಮೈಲಿ ದೂರವಿರುವ ಬೆಳ್ಳಿಬೆಟ್ಟದ ಮೇಲೆ ನಿಂತು ಅಲ್ಲಿಂದ ಫಿರಂಗಿಯನ್ನು ಹಾರಿಸಲು ಗುಂಡು ಕೋಟೆಯ ಬಾಗಿಲಿಗೆ ಸರಿಯಾಗಿ ಬಿದ್ದಿತಂತೆ. ಆದ್ದರಿಂದ ಆ ಸ್ಥಳ ಸರಿಯಾದದ್ದಲ್ಲವೆಂದು ಶ್ರೀರಂಗಪಟ್ಟಣಕ್ಕೆ ಹೋದನೆಂದು ಕಥೆ. ಈ ಕಥೆಯು ನಿಜವೆ, ಆಗಿನ ಕಾಲದಲ್ಲಿ ಅಷ್ಟು ದೂರ ಗುಂಡು ಹಾರಿಸಬಲ್ಲ ಫಿರಂಗಿಗಳಿದ್ದವೆ, ಹೈದರಾಲಿಯು ಕೋಟೆಯನ್ನು ಕಟ್ಟಿ ಮುಗಿಸಿದ ಮೇಲೆ ಫಿರಂಗಿ ಹಾರಿಸಿ ನೋಡುವ ಬದಲು ಮೊದಲೇ ಹಾಗೆ ಮಾಡಿದ್ದರೆ ಕೋಟೆ ಕಟ್ಟುವ ತೊಂದರೆ ತಪ್ಪುತ್ತಿರಲಿಲ್ಲವೆ, ಎಂಬ ಪ್ರಶ್ನೆಗಳು ಈಗ ನಮಗೆ ಹೊಳೆಯುತ್ತವೆ. ಆದರೆ ಆಗ ನಾವು ಯಾವುದನ್ನಾಗಲಿ ಚರಿತ್ರಕಾರನ ಅಥವಾ ಶಾಸ್ತ್ರಕಾರನ ದೃಷ್ಟಿಯಿಂದ ನೋಡುತ್ತಿರಲಿಲ್ಲ. ಈಗಲೂ ಆ ದ್ವೀಪದಲ್ಲಿ ಕೋಟೆಯೇನೋ ನಿಂತಿದೆ. ಅದರ ಮಧ್ಯೆ ಕಾಣುವ ಒಂದು ಗಾರೆಯ ಜಗುಲಿಯ ಬಳಿ ಹಿಂದೆ ಅರಮನೆಯಿದ್ದಿತೆಂದು

ನಾವು ಊಹಿಸಿಕೊಳ್ಳಬೇಕು. ಈಗ ಅದು ನಿರ್ಜನಪ್ರದೇಶ. ನವಿಲು ಗಳಿಗೂ ಮೊಲಗಳಿಗೂ ವಾಸಸ್ಥಾನ. ಬೆಳಗಿನ ಬಿಸಿಲಿನಲ್ಲಿ ನವಿಲುಗಳು ಸುಂದರವಾಗಿ ಗರಿಗೆದರಿ ನರ್ತಿಸುವುದನ್ನು ನಾನು ಎಷ್ಟೋ ವೇಳೆ ನೋಡಿದ್ದೇನೆ. ನದಿಯನ್ನು ಹಾಯುವುದು ಬೇಸಗೆಯಲ್ಲಿ ಸುಲಭವಾದು ದರಿಂದ ನಾವು ಆಗಾಗ ಅಲ್ಲಿಗೆ ತಿಂಡಿಯನ್ನು ಕಟ್ಟಿಸಿಕೊಂಡು ಹೋಗಿ ನದಿಯಲ್ಲಿ ಮನಸದಣಿಯ ಆಟವಾಡಿ ಸಂಜೆಯವರೆಗೂ ಅಲ್ಲಿಯೇ ಇದ್ದು ಬರುವುದುಂಟು. ಆ ಕೋಟೆಯನ್ನು ಭದ್ರಪಡಿಸಿ ಸುತ್ತ ಸೊಗಸಾದ ವನವನ್ನು ನಿರ್ಮಿಸಿಕೊಂಡು ಅಲ್ಲಿ ವಾಸಮಾಡಬೇಕೆಂದು ನನ್ನದೊಂದು ಕನಸು. ಅಲ್ಲಿಗೆ ಹೋದಾಗಲೆಲ್ಲ ಜೊತೆಯವರಿಗೆ ಹೇಳದೆ ಕದ್ದುಹೋಗಿ, ಅರಮನೆಯನ್ನು ಕಟ್ಟುವುದಕ್ಕೆ ಯಾವ ಸ್ಥಳ ಉತ್ತಮವಾದದ್ದು, ಉಪವನ ವನ್ನು ಯಾವ ಕ್ರಮವನ್ನನುಸರಿಸಿ ಮಾಡಬೇಕು, ನದಿಯಿಂದ ನೀರೆತ್ತು ವುದಕ್ಕೆ ಸರಿಯಾದ ಸ್ಥಳ ಯಾವುದು, ಎಂದು ನೋಡಿಕೊಂಡು ಬರುತ್ತಿದ್ದೆನು. ನಿಜವಾಗಿ ಕೋಟ್ಯಧೀಶ್ವರರಾಗಿದ್ದು ಇಂಥ ಕೆಲಸವನ್ನು ಕೈಕೊಳ್ಳು ವವರೂ ಕೂಡ ನನಗಿಂತ ಹೆಚ್ಚು ಜಾಗರೂಕತೆಯನ್ನು ವಹಿಸಲಾರರು. ನಾನು ಸರಿಮಾಡಿಸಿದ ಕೋಟೆಯಲ್ಲಿ ಹಾವು ಚೇಳುಗಳು ಸೇರುವಂಥ ಒಂದು ಸಣ್ಣ ಬಿರುಕು ಕೂಡ ಇರುವುದಿಲ್ಲ. ಕೋಟೆಯ ಮೇಲೆ ಹೂ ಗಿಡಗಳ ಅಂಚುಕಟ್ಟಿರುವ ಸಣ್ಣ ರಸ್ತೆ ಸುತ್ತಲೂ ಹೋಗುವುದು. ಅಲ್ಲಲ್ಲಿ ಎರಡು ಮೂರು ಕಡೆ ಕೋಟೆಯ ಮೇಲೆಯೇ ದೊಡ್ಡ ಕೊಳಗಳಲ್ಲಿ ನದಿಯಿಂದ ನೀರೆತ್ತಿ ತುಂಬಿರುವುದು. ಅಲ್ಲಿಂದ ಸಣ್ಣ ಸಣ್ಣ ತೊರೆಗಳು ಹೊರಟು ಹರಳುಗಲ್ಲುಗಳ ಪಾತ್ರದಮೇಲೆ ಹುಲ್ಲುಗಾವಲಿನ, ತೋಪುಗಳ ಸಣ್ಣ ಸಣ್ಣ ಕಾಡುಗಳ ನಡುವೆ ಸರ್ಪದಂತೆ ಸುತ್ತಿಸುತ್ತಿಕೊಂಡು, ಇಲ್ಲಿ ಗಂಭೀರವಾಗಿ, ಅಲ್ಲಿ ಮೀನುಗಳೊಡನೆ ಚಕ್ಕಂದವಾಡುತ್ತ ಹರಿದು, ಮತ್ತೆ ನದಿಯನ್ನು ಸೇರುವುವು. ನಮ್ಮ ಅರಮನೆಯ ಮೇಲೆ ನಿಂತು ನೋಡಿದರ ಪೂರ್ವಕ್ಕೂ ಪಶ್ಚಿಮಕ್ಕೂ ಬಹುದೂರ ಹೊಳೆಯುತ್ತಿರುವ ಹೇಮಾವತಿ ಉಳಿದ ಕಡೆಯೆಲ್ಲಾ ದಿಗಂತದವರೆಗೂ ಅಲ್ಲಿಂದ ಆಚೆಗೂ ವ್ಯಾಪಿಸಿರುವ ಬತ್ತದ ಪೈರು. ಅರಮನೆಯ ಸುತ್ತಲೂ ವಿಸ್ತಾರವಾದ ಉಪವನ ಅದರಲ್ಲಿ ಅಲ್ಲಲ್ಲಿಯೇ ಸಣ್ಣ ಸಣ್ಣ ಜಲಪಾತಗಳೂ ಕೊಳಗಳೂ ಇರುವೆಡೆಯಲ್ಲಿ

ಹಸುರುಗಿಡಗಳ ಸುತ್ತುಗೋಡೆಯ ನಡುವೆ ಲತಾಗೃಹಗಳು. ಆ ಕೊಳಗಳಿಂದ ಎದ್ದು ಬೆಳುದಿಂಗಳಿನಲ್ಲಿ ಹಾಲುಗಲ್ಲಿನ ಸ್ತಂಭಗಳಂತೆ ತೋರುವ ಚಿಲುಮೆಗಳು. ನದಿಯಲ್ಲಿರುವ ಬಂಡೆಗಳನ್ನು ಒಡೆಯಿಸಿ, ಪಾತ್ರವನ್ನು ವಿಸ್ತರಿಸಿ, ಚಂದ್ರಿಕಾವಿಹಾರಕ್ಕಾಗಿ ಸರೋವರವೊಂದನ್ನು ನಿರ್ಮಿಸುವೆನು. ಅದರಮೇಲಿರುವ ಸಣ್ಣ ಯಂತ್ರಗಾಮಿಯಾದ ದೋಣಿಯಿಂದ ಹುಣ್ಣಿಮೆಯ ರಾತ್ರಿಯಲ್ಲಿ ಹೂಗಳ ಕಂಪಿನಿಂದ ಭಾರವಾದ ಗಾಳಿಯ ಆವರಣದಲ್ಲಿ, ನದಿಯ ಮೊರೆಯ ಶ್ರುತಿಗೆ ಸೇರಿದಂತೆ ನನ್ನ ನಲ್ಲೆಯ ಇನಿದನಿಯು ಏಳುವುದು. ಅರಮನೆಗೆ ಸಮೀಪವಾಗಿರುವಂತೆ ಅಮೃತಶಿಲೆಯಿಂದ ಕಟ್ಟಿಸಿದ ರಮಣೀಯವಾದ ಸ್ನಾನಘಟ್ಟವಿರುವುದು. ಅಲ್ಲಿಗೆ ಮೊಸಳೆಗಳು ಬಾರದಂತೆ, ಆದರೂ ಪ್ರವಾಹಕ್ಕೆ ಅಡಚಣೆಯಿಲ್ಲದಂತೆ ನದಿಯ ಪಾತ್ರದಿಂದ ಮೇಲಿನವರೆಗೂ ಸಲಾಕಿಗಳಿಂದ ಕಟ್ಟಿದ ಕಟ್ಟೆಯಿರುವುದು.....

ಈ ಮಾನಸಿಕ ವ್ಯವಸ್ಥೆಗಳಿಗೆ, ಆಗಸದ ಅರಮನೆಗಳಿಗೆ ಎಷ್ಟು ಹೊತ್ತು ಯೋಚನೆ! ಎಷ್ಟೋ ವೇಳೆ ದಿನವೆಲ್ಲಾ ಈ ಗಂಧರ್ವನಗರದ ನಿರ್ಮಾಣದಲ್ಲಿಯೇ ಕಳೆದುಹೋಗಿದೆ. ಅಲ್ಲಿ ವಾಸಮಾಡುವಾಗ ಒದಗಬಹುದಾದ ಅಪಾಯುಗಳೊಂದನ್ನೂ ಬಿಡದೆ ಯೋಚಿಸಿಕೊಂಡಿದ್ದೆನು. ಹಗಲುಗನಸಿನ ಪ್ರಪಂಚ ಒಂದೊಂದು ವೇಳೆ ಬಹು ಕ್ರೂರವಾದದ್ದು. ಎಂದೂ ಯಾರಿಗೂ ಸಂಭವಿಸದ ವಿಪತ್ತುಗಳಾದರೂ ಅಲ್ಲಿ ಅಸಂಭವವಾಗಿ ಕಾಣುವುದಿಲ್ಲ. ಎಲ್ಲೂ ಇಲ್ಲದ ಮೊಸಳೆಗಳು ನಮ್ಮ ಸ್ನಾನಘಟ್ಟದಲ್ಲಿ ಬಾಯಿ ತೆರೆದು ಕಾದಿರುವುವು; ಶತಮಾನಕ್ಕೊಂದುಸಲ ಬಾರದ ಹುಚ್ಚು ಹೊಳೆ ಬಂದು ನಮ್ಮ ಅರಮನೆ ಕೊಚ್ಚಿಹೋಗಬಹುದು. ಇದೆಲ್ಲಕ್ಕೂ ಮೊದಲೇ ನನ್ನ ಕನಸುಗಳಲ್ಲಿ ಪರಿಹಾರದ ವ್ಯವಸ್ಥೆಯಾಗಿ ಹೋಗಿತ್ತು. ಕುಬೇರನ ಬೊಕ್ಕಸವೊಂದು ಮಾತ್ರ ವಶವಾಗಿದ್ದರೆ, ಒಂದೆರಡು ವರ್ಷಗಳಲ್ಲಿ ನನ್ನ ಗಂಧರ್ವನಗರವು ನಿರ್ಮಿತವಾಗಿಹೋಗುತ್ತಿತ್ತು.

ಈಗ ಎಂಟು ಹತ್ತು ವರ್ಷಗಳೊಳಗೆ ನನ್ನ ದ್ವೀಪವು ಎಷ್ಟೋ ಬದಲಾವಣೆಗಳನ್ನು ಹೊಂದಿದೆ. ನಾನು ವಿಶ್ವವಿದ್ಯಾನಿಲಯವನ್ನು ಸೇರಿದ ಮೇಲೆ ಅದು ನನಗೆ ವಿಹಾರಸ್ಥಾನವಾಗಿರುವುದನ್ನು ಬಿಟ್ಟು ಭರತ ಭೂಮಿಯಲ್ಲೆಲ್ಲಾ ಪ್ರಸಿದ್ಧವಾದ ಸರಸ್ವತೀಪೀಠವಾಯಿತು; ಲಲಿತ ಕಲೆಗಳ

ತೌರುಮನೆಯಾಯಿತು. ಈಗಲೂ ಎಲ್ಲವೂ ಬರಿದಾಗದ ಬೊಕ್ಕಸದ ಆಧಾರದ ಮೇಲೆಯೇ ವ್ಯವಸ್ಥೆಮಾಡಿದ್ದು. ಈಚೆಗೆ ಆ ದ್ವೀಪವು ಸಮಾಜೋದ್ಧಾರದ ಮತ್ತು ದೇಶೋದ್ಧಾರದ ಕೇಂದ್ರಸ್ಥಾನವಾಗುತ್ತಿರುವಂತೆ ತೋರುತ್ತದೆ. ಇನ್ನು ಮುಂದೆ ಏನಾಗುವುದೋ ತಿಳಿಯದು.

ಈ ಕನಸುಗಳೆಲ್ಲದರಲ್ಲಿಯೂ 'ನಾನು' ಎಂಬ ವಸ್ತುವಿನ ಪ್ರಾಮುಖ್ಯತೆಗೆ ಮಿತಿಯೇ ಇಲ್ಲ. ವಿಹಾರವಾಗಲಿ, ಸಾಹಸ ಕಾರ್ಯವಾಗಲಿ, ದೇಶೋದ್ಧಾರವಾಗಲಿ—ಯಾವುದು ಸಾಗಬೇಕಾದರೂ ನನ್ನಿಂದ. ಜಗತ್ತಿನಲ್ಲಿ ಮನಮೋಹಕವಾದ ಗಿರಿಗಳೇಳುವುದು, ನದಿಗಳು ಪ್ರವಹಿಸುವುದು, ಹೂವುಗಳು ಅರಳಿ ಸುಗಂಧವನ್ನು ಬೀರುವುದು, ಮಾನವ ವರ್ಗದಿಂದ ಕ್ರಿಮಿ ಕೀಟಗಳವರೆಗೆ ಜೀವಕೋಟಿಗಳು ಸೃಷ್ಟಿಯಾಗಿರುವುದು—ಎಲ್ಲವೂ ನನಗಾಗಿ. ಈ ವಿಸ್ತಾರವಾದ ರಂಗಸ್ಥಳದಲ್ಲಿ ನಾನೇ ಮುಖ್ಯ ನಟ; ಉಳಿದವರೆಲ್ಲರೂ ನನ್ನ ಪಾತ್ರವು ಕಳೆಕಟ್ಟುವಂತೆ ನನಗೆ ಹಿನ್ನೆಲೆಯನ್ನು ಕಲ್ಪಿಸುವವರು.

ಆದರೆ ನಮ್ಮ ಜೀವನದ ವಸಂತಕಾಲ ಕಳೆದಮೇಲೆ ನಾವು ಹಿಂತಿರುಗಿ ನೋಡಿದರೆ ನಾವು ಬಂದ ದಾರಿಯಲ್ಲಿ ನಮ್ಮ ಹೆಜ್ಜೆಯ ಗುರುತೂ ಕಾಣುವುದಿಲ್ಲ. ನಾವು ಬದುಕಿದ್ದುದಕ್ಕೆ, ಆ ಮಾರ್ಗದಲ್ಲಿ ತೊಳಲಿ ಮುಂದುವರಿದುದಕ್ಕೆ ಸಾಕ್ಷಿಯೇನು? ಎಂದಿನಂತೆ ಪ್ರಪಂಚದ ಕಾರ್ಯಕಲಾಪಗಳು ನಡೆಯುತ್ತಿವೆ. ನಮ್ಮ ಸಹವಾಸವನ್ನಾಗಲಿ, ಅದರಿಂದುಂಟಾಗಿರಬಹುದಾದ ಸಂತೋಷವನ್ನಾಗಲಿ, ಅದರ ಅಭಾವಕ್ಕಾಗಿ ದುಃಖವನ್ನಾಗಲಿ ಸೂಚಿಸಲು ಏನೂ ಕಣ್ಣಿಗೆ ಬೀಳುವುದಿಲ್ಲ. ನಮ್ಮ ಜೀವನವು ನೀರಿನ ಮೇಲಿನ ಶಾಸನದಂತಾಗಿದೆ. ಪ್ರಪಂಚಕ್ಕೆ ನಮ್ಮ ಆವಶ್ಯಕತೆಯಿದೆಯೆ, ನಾವು ಇಲ್ಲದಿದ್ದಾಗ ನಮ್ಮನ್ನು ಯಾರಾದರೂ ನೆನಸಿಕೊಳ್ಳುವರೆ, ಎಂದು ಆಶ್ಚರ್ಯಪಡುವಂತಾಗುತ್ತದೆ.

ಚಿಕ್ಕಂದಿನಲ್ಲಿ ನಮ್ಮ ಆಸೆಗೂ ಭರವಸೆಗೂ ಪಾರವೇ ಇಲ್ಲ. ಮಾನವನ ಶಕ್ತಿ ಸಾಹಸಗಳಿಗೆ ಎಲ್ಲೆಯುಂಟೆಂಬ ಭಾವನೆಯೇ ಮನಸ್ಸಿಗೆ ಬಂದಿರುವುದಿಲ್ಲ. ನಾವು ನಮನಮಗೆ ಎಷ್ಟು ಮನೋಹರವಾದ ಮಳೆಬಿಲ್ಲಿನ ಬಣ್ಣಗಳಿಂದ ಕೂಡಿದ ಮಹಿಮಾಯುಕ್ತವಾದ ಪ್ರಪಂಚವನ್ನು ನಿರ್ಮಿಸಿ

ಕೊಂಡಿರುವೆವು! ಆದರೆ ಕಾಲವು ಒಂದೊಂದು ವರ್ಷವಾಗಿ ನಮ್ಮ ಮೇಲೆ ಹರಿದುಹೋದಹಾಗೆ ನಮ್ಮ ಭವಿಷ್ಯಲೋಕವು ಕಳೆಗುಂದುತ್ತಾ ಬರುವುದು. ಹತ್ತು ವರ್ಷಗಳು ಕಳೆದ ಮೇಲೆ ಹಿಂದಿನ ಕಾಲದ ಕನಸುಗಳನ್ನು ನೆನಪಿಗೆ ತಂದುಕೊಂಡರೂ ಅದೆಷ್ಟು ವ್ಯತ್ಯಾಸಗಳು ಕಾಣುವುವು! ನಂದನವನವನ್ನು ಕನಸಿನಲ್ಲಿ ಕಂಡು ಅನಂತರ ಕಿಚ್ಚಿನಲ್ಲಿ ಬೆಂದ ಕಾಡಿನಲ್ಲಿ ಕಣ್ಣುಬಿಟ್ಟಂತಾಗುತ್ತದೆ. ಮೊದಲಿನ ಭಾವನಾ ಜೀವನಕ್ಕೂ ಈಗಿನ ವಾಸ್ತವ ಜೀವನಕ್ಕೂ ಅದೆಷ್ಟು ಅಂತರ! ನಾನು—ಚಿಕ್ಕಂದಿನಲ್ಲಿ ಮನಸ್ಸಿನಲ್ಲಿ ಚಿತ್ರಿಸಿಕೊಂಡಿದ್ದ ಆ 'ನಾನು'—ಈಗ ಎಲ್ಲಿ? ಕುಬೇರನಂತೆ ಧನಸಂಪತ್ತಿಯುಳ್ಳವನು, ಕರ್ಣಾರ್ಜುನರಂತೆ ಶೌರ್ಯ ಔದಾರ್ಯಗಳುಳ್ಳವನು, ಕೋಗಿಲೆಯ ಇಂಚರದಂತೆ ದನಿಯುಳ್ಳವನು, ಕೃಷ್ಣನ ವೇಣುಗಾನದಂತೆ ಮನೋಮೋಹಕವಾದ ಕವಿತೆಗಳನ್ನು ಸೃಷ್ಟಿಸುವವನು—ಆ 'ನಾನು' ಎಲ್ಲಿ, ಪ್ರಪಂಚದ ಹೊಡೆತಕ್ಕೆ ಸಿಕ್ಕಿ ಕೈಕಾಲು ಅಲುಗಿಸಲು ಸ್ವಾತಂತ್ರ್ಯವಿಲ್ಲದೆ ಮನಸ್ಸಿನ ಅಳಲನ್ನು ಹೇಳಿಕೊಳ್ಳಲು ನಾಲಗೆಯಿಲ್ಲದೆ ಮೂಕನಾದ ಬಡಜೀವಿಯೆಲ್ಲಿ!

ಆಗಿನಂತೆ ನಿರಾತಂಕವಾಗಿ ಯಕ್ಷಕನ್ಯೆಯರೊಡನೆ ವಿಹರಿಸುವುದಂತಿರಲಿ, ಒಂದು ಗಳಿಗೆ ನಮ್ಮ ಬೇಸರದ ಜಡಜೀವನವನ್ನು ಮರೆಯುವುದು ಸಹ ಈಗ ಅಸಾಧ್ಯವಾಯಿತು. ನಾನು ಮೊದಲು ಯಾವ ಸುಖಸಂತೋಷಗಳನ್ನು ಗಮನಕ್ಕೆ ಅರ್ಹವಲ್ಲವೆಂದು ತಿರಸ್ಕರಿಸಿ ನೂಕಿದ್ದೆನೋ, ಅವು ಸಹ ಈಗ ಹಗಲುಗನಸುಗಳಾದುವು. ಜೀವನದ ಆಶೆಗಳೆಲ್ಲವೂ ಮರಳುಗಾಡಿನಲ್ಲಿ ಪ್ರಯಾಣಿಕರನ್ನು ಮೋಸಗೊಳಿಸುವ ಮರೀಚಿಕೆಯಂತೆ ಶೂನ್ಯದಲ್ಲಿ ಕೊನೆಗಂಡುವು. ಒಂದು ಕಡೆ ಹೃದಯದ ಮಿತಿಯಿಲ್ಲದ ಎಂದಿಗೂ ತೃಪ್ತಿಹೊಂದದ ಉದ್ವೇಗ; ಇನ್ನೊಂದು ಕಡೆ ಅದನ್ನು ಮೂಾಕರಿಸಿ ದಿನದಿನಕ್ಕೂ ಹತ್ತಿರ ಬಂದು ಕೃಷ್ಣಪಕ್ಷದ ಕತ್ತಲಂತೆ ನಮ್ಮನ್ನು ಕವಿಯುತ್ತಿರುವ ನಿರಾಶೆ. ಕಾಲವೋ ದಿನದ ಮೇಲೆ ದಿನ, ತಿಂಗಳ ಮೇಲೆ ತಿಂಗಳು, ನಮ್ಮ ಮೇಲೆ ಉರುಳಿ ನಮ್ಮ ಸವಿಬಯಕೆಗಳನ್ನೂ ಹೊಂಗನಸುಗಳನ್ನೂ ತುಳಿದು ಮಣ್ಣುಮಾಡುವುದು. ಈಗ ಎಲ್ಲಿ ನೋಡಿದರೂ ಅರಕೆ, ಅಪೂರ್ಣತೆ. ಕಾಡಿನ ಸೊಬಗಿನಲ್ಲಿ, ಬಯಲಿನ

ವೈಶಾಲ್ಯದಲ್ಲಿ, ಪರ್ವತಮಾಲೆಯ ಭೀಷಣ ಸೌಂದರ್ಯದಲ್ಲಿ, ಎಳೆಬಿಸಿಲಿನ ನಗೆಯಲ್ಲಿ, ಮಾನವ ಹೃದಯದ ಪ್ರೇಮದಲ್ಲಿ—ಎಲ್ಲದರಲ್ಲಿಯೂ ಅಪೂರ್ಣತೆ; ಎಲ್ಲವೂ ಮನಸ್ಸಿನಲ್ಲಿ ಅತೃಪ್ತಿಯುಂಟುಮಾಡುವುವು. ಎಷ್ಟು ರಮ್ಯವಾದ ಸ್ಥಳಗಳಿಗೆ ಹೋದರೂ, ಎಂಥ ಸಹವಾಸದಲ್ಲಿದ್ದರೂ, ಏನು ಸುಖವನ್ನನು ಭವಿಸಿದರೂ, ಅತೃಪ್ತಿಯು ಹಿಂಗುವುದಿಲ್ಲ. ಹಿಂದಿನಂತೆ ಭಾವನೆಯಲ್ಲಿ ಮುಳುಗಿ ಸುಲಭವಾಗಿ ತೃಪ್ತಿಹೊಂದುವ ಪ್ರಕೃತಿಯು ನಾಶವಾಗಿ ಹೋಯಿತು. ಈಗ ಏನಿದ್ದರೂ ಕೊರತೆ, ಏನೆಂದು ಹೇಳಲು ತೋರದಿದ್ದರೂ ಕೊರತೆಯೇನೋ ಇರುವುದು. ಬೆಳುದಿಂಗಳು ಸುಂದರವಾಗಿದ್ದಷ್ಟೂ, ತಂಗಾಳಿಯು ಹಿತವಾಗಿದ್ದಷ್ಟೂ ಅತೃಪ್ತಿಯೂ ಒಂದು ಬಗೆಯ ಅಸುಖವೂ ಹೆಚ್ಚುವುವು.

ಮೈಸೂರಿಗೆ ಸ್ವಲ್ಪ ದೂರದಲ್ಲಿ ನಿರ್ಜನವಾದ ಬೋರೆಯ ಮೇಲೆ ಒಂದು ಬಂಗಲೆಯಿದೆ. ಅದರ ಮಾಳಿಗೆಯ ಮೇಲೆ ನಾನು ಕಳೆದ ಒಂದು ಬೇಸಗೆಯ ಸಂಜೆಯ ನೆನಪು ಯಾವಾಗಲೂ ಮನಸ್ಸಿನಲ್ಲಿರುವುದು. ಅಂದು ಸೂರ್ಯಾಸ್ತಮಯವಾದ ಮೇಲೆ ಪಶ್ಚಿಮ ದಿಕ್ಕು ಅಪೂರ್ವವಾದ ಸ್ವರ್ಗೀಯವಾದ ಸೌಂದರ್ಯವನ್ನು ತಳೆದಿತ್ತು. ಪೂರ್ವದಲ್ಲಿ ದೂರದ ಚಾಮುಂಡಿಯ ಬೆಟ್ಟದ ಸಾಲುದೀಪಗಳು ಅಂತರಿಕ್ಷದಲ್ಲಿ ಗಂಧರ್ವರು ಕಟ್ಟಿದ ನಗರತೋರಣಗಳಂತೆ ಕಂಗೊಳಿಸುತ್ತಿದ್ದುವು. ಸ್ವಲ್ಪ ಹೊತ್ತಿನ ಕೆಳಗೆ ಕೇಳಿದ ಮಧುರಗಾನದ ಇಂಪು ಇನ್ನೂ ಕಿವಿಯಲ್ಲಿಯೇ ಉಳಿದಿತ್ತು. ಹಿಂದಿನ ಸವಿನೆನಪುಗಳು ಮನಸ್ಸಿನಲ್ಲಿ ಸುಳಿದಾಡುತ್ತಿದ್ದುವು. ಸಂಜೆಯ ಆವರಣದಲ್ಲಿ ಶಾಂತಿಯು ತುಂಬಿತ್ತು. ನನ್ನ ಅನುಭವದಲ್ಲಿ ಅದೊಂದು ಅತ್ಯಂತ ಸುಖಕರವಾದ ಸಂಜೆ. ಆದರೂ ಅಂದಿನಷ್ಟು ವ್ಯಾಕುಲವನ್ನು ನಾನು ಎಂದೂ ಅನುಭವಿಸಿರಲಿಲ್ಲ. ಅದಕ್ಕೆ ಕಾರಣ ತಿಳಿಯದು, ಏನೋ ಅತೃಪ್ತಿ—ಹಗಲುಗನಸುಗಳನ್ನು ಕಾಣುವವರಿಗೆ ಸೌಖ್ಯವಿಲ್ಲ. ಮಕ್ಕಳು ಚಂದ್ರನನ್ನು ಹಿಡಿಯಲು ಕೈನೀಡಿದರೆ ನಾವು ಗಾಳಿಯನ್ನು ಅಪ್ಪಿ ಮುತ್ತಿಡಲು ಹೋಗುವೆವು. ಇನ್ನೇನು ನಮ್ಮ ಕೈಗೆ ಸಿಕ್ಕಿತು ಎಂದು ತೋರುವಂತೆ ಬೆಳಕನ್ನು ನಮ್ಮ ಮುಂದೆ ಹಿಡಿದು ಭಾವನಾಶಕ್ತಿಯು ನಮ್ಮನ್ನು ಎಳೆದೆಳೆದು ಕೊನೆಗೆ ಕೆಸರಿನಲ್ಲಿ ಕೈಬಿಡುವುದು. ಮಕ್ಕಳ:

ಜೊತೆಗಾರರೆದುರಿಗೆ ತಿಂಡಿಯನ್ನು ಹಿಡಿದು ಆಸೆ ತೋರಿಸಿ ಬಾಯಿಗೆ ಹಾಕಿಕೊಳ್ಳುವಂತೆ ನಮ್ಮ ಕಣ್ಣೆದುರಿಗೆ ಸ್ವರ್ಗಸಮವಾದ ಜೀವನದ ದೃಶ್ಯ ವನ್ನು ನಿರ್ಮಿಸಿ ಸನ್ನೆಮಾಡಿ ನಮ್ಮನ್ನು ಕರೆಯುವುದು. ಆದರೆ ನಮಗೆ ಅಲುಗಾಡಲು ಸ್ವಾತಂತ್ರ್ಯವಿಲ್ಲ. ಪಂಜರದಲ್ಲಿರುವ ಕಾಡುಗಿಳಿಯಂತೆ ಪರದಾಡಿ ಬೇಸತ್ತು ಸುಮ್ಮನಾಗುವೆವು.

ಇಷ್ಟಾದರೂ ನಾವು ನಿಜವಾಗಿ ಆ ಕಲ್ಪನೆಯ ಗಂಧರ್ವನಗರ ದಲ್ಲಿರಬಲ್ಲೆವೆ? ಜಗತ್ತು ಚಿಂತಾಮಯ, ಅಲ್ಲಿ ನಮಗೆ ತೃಪ್ತಿಯಾಗುವಷ್ಟು ಪ್ರೇಮವಿಲ್ಲ, ಶಾಂತಿಯಿಲ್ಲ. ಆದರೂ ಅದನ್ನು ಬಿಟ್ಟು ನಮ್ಮ ಮಾಯಾ ಪ್ರಪಂಚದಲ್ಲಿ ಉಸಿರೆಳೆಯಬಲ್ಲೆವೆ? ಅಲ್ಲಿಯೂ ಅರಕೆಯಿರದೆ? ಅಥವಾ ಅರಕೆಯಿಲ್ಲದ ಸ್ಥಿತಿಯಲ್ಲಿ ಸೌಖ್ಯತಾನೆ ಇರುವುದೆ? ಅಗಲಿಕೆಯು ಕಷ್ಟ; ಆದರೆ ಪುನಃ ಸೇರುವ ಸೌಖ್ಯವನ್ನನುಭವಿಸಲು ಅಗಲಿಕೆಯು ಇರಲೆನ್ನಿ ಸುವುದು. ಜೀವನದಲ್ಲಿ ಅಗಲಿಕೆಯೂ ಒಂದು ಸೌಂದರ್ಯ. ಆನಂದಕ್ಕೆ ವ್ಯಾಕುಲದಿಂದ ಪೂರ್ಣತೆ ಬರುವುದು; ಜೀವನಕ್ಕೆ ಅರಕೆಯಿಂದ ಪೂರ್ಣತೆ ಬರುವುದು. ಅದಲ್ಲದೆ ಕನಸಿನ ಲೋಕದಲ್ಲಿರುವ ನಮಗೆ ನಮ್ಮ ಬಯಕೆ ಗಳು ಕೈಗೂಡದಿದ್ದರೂ ಒಯಕೆಯಾದರೂ ಇದೆ; ಸೌಂದರ್ಯ ನಮ್ಮ ದಲ್ಲದಿದ್ದರೂ ಸೌಂದರ್ಯದ ಭಾವವಾದರೂ ಇದೆ; ತೇಜಸ್ಸು ನಮ್ಮಿಂದ ಹೊರಹೊಮ್ಮದಿದ್ದರೂ ತೇಜಸ್ಸಿನ ಪ್ರಭೆಯಾದರೂ ನಮ್ಮ ಮೇಲೆ ಬಿದ್ದಿದೆ. ನಮ್ಮ ಜೀವನವೂ ಮಾನವರೆಲ್ಲರ ಜೀವನದಂತೆಯೇ ಸುಖದಲ್ಲಿ ದುಃಖವುಳ್ಳದ್ದು, ದುಃಖದಲ್ಲಿ ಸುಖವುಳ್ಳದ್ದು. ಹಗಲುಗನಸುಗಳನ್ನು ಕಾಣುವವನಿಗೆ ಸುಖವಿಲ್ಲವೆಂದರೂ ಅವನಷ್ಟು ಸುಖಿಯು ಮತ್ತಾರೂ ಇಲ್ಲ.

———

# ಹೂವುಗಳು

"ಹೊಲದಲ್ಲಿ ಬೆಳೆಯುವ ಹೂವುಗಳನ್ನು ನೋಡಿ, ಅವು ನೂಲುವುದಿಲ್ಲ, ನೇಯುವುದಿಲ್ಲ; ಆದರೂ ಸಾಲಮನ್ ಚಕ್ರವರ್ತಿ ತನ್ನ ವೈಭವದ ಔನ್ನತ್ಯದಲ್ಲಿ ಸಹ ಅಷ್ಟು ಸುಂದರವಾದ ಉಡುಪನ್ನು ಧರಿಸಿರಲಿಲ್ಲ." ಇದು ಎರಡು ಸಾವಿರ ವರ್ಷಗಳ ಕೆಳಗೆ ಕ್ರಿಸ್ತನು ಹೇಳಿದ ಮಾತು. ಹೂವುಗಳನ್ನು ನೋಡಿದಾಗಲೆಲ್ಲಾ ಈ ಮಾತು ಜ್ಞಾಪಕಕ್ಕೆ ಬರುತ್ತದೆ. ಭಗವಂತನು ವಿಶ್ವದಲ್ಲಿ ಸೌಂದರ್ಯವನ್ನು ಅನಂತ ಔದಾರ್ಯದಿಂದ ಎರಚಿರುವನೆಂಬುದಕ್ಕೆ ಅಂತರಿಕ್ಷದಲ್ಲಿ ತಾರೆಗಳೂ ಭೂಮಿಯಲ್ಲಿ ಹೂವುಗಳೂ ಸಾಕ್ಷಿ. ಎರಡೂ ತಮ್ಮ ಎಣೆಯಿಲ್ಲದ ಸೌಂದರ್ಯದಿಂದ ನಮ್ಮ ಮನಸ್ಸನ್ನು ಸೆಳೆಯುತ್ತವೆ. ಆದರೆ ನಮಗೆ ನಕ್ಷತ್ರಗಳಿಗಿಂತಲೂ ಹೂವುಗಳು ಪ್ರಿಯವಾದುವು. ನಕ್ಷತ್ರಗಳಿಗೂ ನಮಗೂ ಅನೇಕ ಕೋಟಿ ಮೈಲಿಗಳ ಅಂತರ; ಹೂವುಗಳು ನಮ್ಮ ಮನೆಯಲ್ಲೇ ಹುಟ್ಟಿ ಬೆಳೆಯುವುವು. ನಕ್ಷತ್ರಗಳ 'ಜೀವನ'ಕ್ಕೂ ನಮ್ಮ ಜೀವನಕ್ಕೂ ಸಾದೃಶ್ಯವಿಲ್ಲ. ಮನುಷ್ಯನ ಜೀವಮಾನ ಕಾಲವನ್ನು ದೃಷ್ಟಿಯಲ್ಲಿಟ್ಟುಕೊಂಡು ನೋಡಿದರೆ ನಕ್ಷತ್ರಗಳು ಕಾಲನ ಹಿಡಿತಕ್ಕೆ ಸಿಕ್ಕದೆ ನಿತ್ಯವಾದವುಗಳು. ಅವುಗಳಿಗೆ ಜರೆಯಿಲ್ಲ, ಮರಣವಿಲ್ಲ. ಅವು ಬಿಸಿಲು ಮಳೆ ಚಳಿಗಾಳಿಗಳ ಹೊಡೆತಕ್ಕೆ ಸಿಕ್ಕವು. ನಮ್ಮ ಈ ಪ್ರಪಂಚದಲ್ಲಿ ಏನು ಅನಾಹುತಗಳಾಗಲಿ ಅವು ಅಚ್ಚಳಿಯದೆ ತಮ್ಮ ಶೀತಲಕಾಂತಿಯನ್ನು ಬೀರುತ್ತ, ಹತ್ತು ಸಾವಿರ ವರ್ಷಗಳ ಹಿಂದೆ ಹೇಗೆ ಮಿನುಗುತ್ತಿದ್ದವೋ ಇನ್ನು ಹತ್ತುಸಾವಿರ ವರ್ಷಗಳು ಕಳೆದ ಮೇಲೂ ಹಾಗೆಯೇ ಮಿನುಗುತ್ತಿರುವುವು. ಹೂವುಗಳಾದರೆ ನಮ್ಮಂತೆಯೇ ಜನನಮರಣಗಳುಳ್ಳವು. ಪ್ರಾಯದಿಂದ ಉಬ್ಬಿ ಅರಳುವುವು, ಮುಪ್ಪಿನಿಂದ ಕುಗ್ಗಿ ಕಾಂತಿಹೀನವಾಗುವುವು. ಈ ಪ್ರಪಂಚಕ್ಕೆ ಸಹಜವಾದ ಜೀವನಕ್ರಮದಲ್ಲಿ ನಮ್ಮಂತೆಯೇ ಅವೂ ಭಾಗಿಗಳು. ಯಾರೋ ಒಬ್ಬ ಕವಿಯು ನಕ್ಷತ್ರಗಳನ್ನು ಅಂತರಿಕ್ಷದ ಕವನವೆಂದು ಕರೆದಿರುವನು. ಹೂವುಗಳು ಭೂದೇವಿಯ ಕವನ, ಆಕೆಯ

ಹೃದಯದಲ್ಲಿ ಅಡಗಿರುವ ಸೌಂದರ್ಯಾಕಾಂಕ್ಷೆಯೂ ಸವಿಗನಸುಗಳೂ ರೂಪುಗೊಂಡ ಕವನ. ಈ ಕವನವು ನಮ್ಮ ದೇಶದಲ್ಲಿ ವರ್ಷದ ಎಲ್ಲಾ ಋತುಗಳಲ್ಲಿಯೂ ಸ್ವಲ್ಪಸ್ವಲ್ಪ ಕಂಡುಬಂದರೂ ವಸಂತ ಋತುವಿನಲ್ಲಿ ಅಪರಿಮಿತವಾದ ಮಾಧುರ್ಯವನ್ನೂ ಪರಿಪೂರ್ಣತೆಯನ್ನೂ ಪಡೆಯು ವುದು. ಆಗ ಮರಗಿಡಗಳ ಒಣಕಡ್ಡಿಗಳಲ್ಲಿ ಹೊಸ ಚೈತನ್ಯವು ಪ್ರವಹಿಸು ವುದು; ಅವುಗಳ ಜೀವರಹಿತವಾದ ತೊಗಟೆಯನ್ನು ಒಡೆದು ತಳಿರು ಹೊರಡುವುದು; ಭೂಮಿಯ ಒರಟು ನೆಲವನ್ನು ಸೀಳಿಕೊಂಡು ಸಾವಿರಾರು ಸಣ್ಣ ಪುಟ್ಟ ಗಿಡಗಳು ಹೊರಹೊಮ್ಮಿ ಪುಷ್ಪಿಸುವುವು. ಭೂದೇವಿಯ ಈ ಕವನವು ಶ್ರೀಮಂತರ ಸೌಧಗಳ ಸುತ್ತಿನ ಉಪವನವನ್ನು ಹೇಗೋ ಬಡವರ ಗುಡಿಸಲಿನ ಪಕ್ಕವನ್ನೂ ಹಾಗೆಯೇ ರಮ್ಯವಾಗಿ ಮಾಡುವುದು. ಪಟ್ಟಣದ ಶೃಂಗಾರವನಗಳಲ್ಲಿ ನೋಡಿದರೆ ಹಬ್ಬದುಡಿಗೆಯನ್ನು ತೊಟ್ಟು ಉತ್ಸವಕ್ಕಾಗಿ ಹೊರಟಿರುವ ಧನಿಕರ ಮಕ್ಕಳಂತೆ ಸಾವಿರ ಬಣ್ಣದ ಸಣ್ಣ ಸಣ್ಣ ಹೂವುಗಳು ನೆರೆದಿರುವುವು; ಪಟ್ಟಣವನ್ನು ಬಿಟ್ಟು ಎಲ್ಲಿಯೋ ಧೂಳಿಮಯವಾದ ರಸ್ತೆಯಲ್ಲಿ ಜುಗುಪ್ಸೆಯಿಂದ ಹೋಗುತ್ತಿದ್ದರೆ ಅಲ್ಲಿಯೂ ರಸ್ತೆಯ ಪಕ್ಕದ ಪೊದೆಯಿಂದ ಒಂದೆರಡು ಹೂವುಗಳು ನಿಮ್ಮನ್ನು ನೋಡಿ ಮೆಲುನಗೆಯನ್ನು ಬೀರುವುವು. ಆ ನಗೆಯಿಂದ ನಿಮ್ಮ ಬೇಸರ ಅಡಗ ದಿದ್ದರೆ, ನಿಮ್ಮ ಮನಸ್ಸು ಅರಳದಿದ್ದರೆ, ನಿಜವಾಗಿಯೂ ನಿಮ್ಮನ್ನು ತಮಸ್ಸು ಆವರಿಸಿಕೊಂಡಿರಬೇಕು.

ನಾವು ಒಂದು ದಿನವೆನ್ನುವುದು ಹೂವುಗಳಿಗೆ ಒಂದು ಜೀವಮಾನದ ಕಾಲ. ಆದರೂ ಅವು ತಮ್ಮ ಅಲ್ಪಾಯುಸ್ಸನ್ನು ಎಷ್ಟು ಹರ್ಷದಿಂದ ಕಳೆಯುವುವು! ಅವಕ್ಕೆ ನಮಗಿರುವಂತೆ ಹಿಂದುಮುಂದಿನ ಎಣಿಕೆಯಿಲ್ಲ; ಅವು ಮಾಗಿಗೂ ಮುಪ್ಪಿಗೂ ಕೂಡಿಡಬೇಕಾಗಿಲ್ಲ. ನಮ್ಮಂತೆ ದೊರಕ ದುದಕ್ಕೆ ಕೈಚಾಚಿ, ಸೃಷ್ಟಿಯಾಗದುದನ್ನು ಬಯಸಿ, ಅವು ಯಾತನೆ ಪಡುವುದಿಲ್ಲ. "ಈಗ ಅಂತರಿಕ್ಷವು ನೀಲವಾಗಿದೆ; ಸೂರ್ಯನ ಕಿರಣಗಳು ಸುಖೋಷ್ಣವನ್ನು ಬೀರುತ್ತಿವೆ; ಗಾಳಿ ಮೆಲ್ಲನೆ ಬೀಸುತ್ತಿದೆ; ಅವು ಕೊಡುವ ಸುಖವನ್ನನುಭವಿಸಿದರೆ ಸಾಕು, ನಾಳೆ ಯಾರೋ ನಾವು ಯಾರೋ" ಎಂದುಕೊಂಡು ಅವು ನಿಶ್ಚಿಂತೆಯಾಗಿರುವಂತೆ ತೋರುತ್ತದೆ.

ಅಂತೂ ಅರಳಿದ ಹೂವಿನಲ್ಲಿ ಹರ್ಷ ಉಕ್ಕಿಬರುವಂತಿರುವುದು. ಪ್ರತಿಯೊಂದು ಹೂವೂ ತಾನು ಸೇವಿಸುವ ಗಾಳಿಯನ್ನು ಆನಂದದಿಂದ ಸೇವಿಸುವುದೆಂದು ವರ್ಡ್ಸ್‌ವರ್ತ್ ಕವಿಯು ಹೇಳಿದನು. ಹೂವುಗಳ ಜೀವನವನ್ನು ನೋಡಲು ಕಣ್ಣಿರುವವರಿಗೆ ಹಾಗೆನ್ನಿಸುವುದು ಆಶ್ಚರ್ಯವಲ್ಲ. ಅದರಲ್ಲಿಯೂ ಪ್ರಾತಃಕಾಲದಲ್ಲಿ ಮೆಲ್ಲನೆ ಗಾಳಿ ಬೀಸುತ್ತಿರುವಾಗ, ಆಗತಾನೇ ಉದಯಿಸುತ್ತಿರುವ ಸೂರ್ಯನ ಗುಲಾಬಿ ಬಣ್ಣದ ಕಿರಣಗಳು ಹೂವುಗಳನ್ನು ಚುಂಬಿಸಿ ಎಲೆಗಳ ಮೇಲೆ ಬಟ್ಟುಬಟ್ಟಾಗಿ ನಿಂತಿರುವ ಮಂಜಿನ ಹನಿಗಳನ್ನು ಮಾಣಿಕ್ಯವಾಗಿ ಮಾಡುತ್ತಿರುವಾಗ, ಎಲೆಗಳ ನಡುವೆ ಹೂವುಗಳು ಬಳುಕುತ್ತ ನಲಿಯುತ್ತ ಇರುವುದನ್ನು ನೋಡಿದರೆ ಅವುಗಳಿಗೆ ಜೀವನದಲ್ಲಿ ಆನಂದವಿಲ್ಲವೆಂದು, ಆನಂದಾನುಭವಶಕ್ತಿಯಿಲ್ಲವೆಂದು, ಹೇಳುವವರು ಯಾರು!

ನನ್ನ ಕೊಠಡಿಯ ಬಳಿ ಒಂದು ಜಾಜಿಯ ಬಳ್ಳಿ ಹಬ್ಬಿ ಕಿಟಕಿಯನ್ನೆಲ್ಲಾ ಆವರಿಸಿಕೊಂಡು ಅದಕ್ಕೆ ಹಸುರೆಲೆಗಳ ತೆರೆಯನ್ನು ಹಾಕುವುದರಲ್ಲಿತ್ತು. ನಾನು ಅದನ್ನು ಸ್ವಲ್ಪಮಟ್ಟಿಗೆ ಸರಿಸಿ ಕಿಟಕಿಗೆ ಜಾಜಿಯ ತಳಿರಿನ ತೋರಣವನ್ನು ಮಾಡಿಕೊಂಡಿದ್ದೆನು. ಆದರೂ ಹೂವು ಬಿಟ್ಟಿದ್ದ ಒಂದು ಕುಡಿಯು ಕೊಠಡಿಯೊಳಗಡೆ ಬಂದು ನಾನು ಮೇಜಿನ ಬಳಿ ಕುಳಿತಿದ್ದರೆ ನನ್ನ ಹತ್ತಿರದಲ್ಲಿಯೇ ಸುಳಿಯುತ್ತಿತ್ತು. ನನ್ನ ಸ್ನೇಹಿತನು ಅದನ್ನು ಕಂಡು "ನೋಡು, ಅದು ಹಿಂದಿನ ಜನ್ಮದಲ್ಲಿ ನಿನ್ನ ಪ್ರೇಯಸಿಯಾಗಿದ್ದಿತೋ ಏನೋ! ನಿನ್ನ ಪ್ರಣಯವನ್ನು ಬಯಸುತ್ತಿದೆ!'' ಎಂದನು; ನಾವಿಬ್ಬರೂ ನಕ್ಕೆವು. ಆದರೆ ಒಂದೊಂದುವೇಳೆ ನಿಜವಾಗಿಯೂ ಹೂವುಗಳು ನಮ್ಮ ಸಹವಾಸವನ್ನು ಅಪೇಕ್ಷಿಸುವುವೋ ಏನೋ ಎನ್ನಿಸುವುದು. ಹೂವುಗಳಲ್ಲಿ ನೋಡಿದರೆ ನಮ್ಮಲ್ಲಿರುವಂತೆಯೇ ಧೈರ್ಯಶಾಲಿಗಳಾದ ಸ್ವಾವಲಂಬಿಗಳಿರುವುವು; ಸೂಕ್ಷ್ಮ ಸ್ವಭಾವದ ಪರಾಶ್ರಯಿಗಳೂ ಇರುವುವು. ಮೇಲೆ ಬಿದ್ದು ತಮ್ಮ ಸೌಂದರ್ಯವನ್ನು ಮೆರೆಯಿಸುವ ಹೂವುಗಳಿರುವುವು; ಲಜ್ಜಾವತಿಯಾದ ನವವಧುವಿನಂತಿರುವ ಹೂವುಗಳೂ ಇರುವುವು. ಹೂವುಗಳ ಜೀವನಕ್ಕೂ ಮನುಷ್ಯನ ಜೀವನಕ್ಕೂ ಸಾದೃಶ್ಯವಿದೆಯೆಂದೂ ನಮಗಿರುವ ಭಾವಾನುಭವಗಳು ಅವುಗಳಿಗೂ ಇರಬಹುದೆಂದೂ ಕೆಲವುವೇಳೆ ತೋರುವುದು.

ಒಂದು ದಿನ ಸಂಜೆ ಆರು ಘಂಟೆಯ ಮೇಲೆ ನಮ್ಮೂರ ಬಳಿ ಇರುವ ಬೆಟ್ಟದಮೇಲೆ ತಿರುಗುತ್ತಿದ್ದಾಗ ಒಂದೆಡೆಯಲ್ಲಿ ಮೃದುವಾದ ಸುವಾಸನೆ ಬಂದಿತು. ಅದು ಯಾವುದೋ ಕಾಡು ಹೂವಿನದು. ಹೂವಿನ ಹೆಸರು ತಿಳಿಯದು; ನೋಡುವುದಕ್ಕೆ ಸ್ವಲ್ಪ ಮಲ್ಲಿಗೆಯಂತೆಯೇ ಇದ್ದದ್ದರಿಂದ ಯಾರೋ ಕಾಡುಮಲ್ಲಿಗ ಎಂದರು. ಅದಕ್ಕೆ ಹೆಸರಿಲ್ಲದಿದ್ದರೂ ಇರಬಹುದು. ಅದು ಬಹು ಸಂಕೋಚ ಸ್ವಭಾವದ ಹೂವೆಂದು ತೋರಿತು. ತನ್ನನ್ನು ಹಾದಿಗಾರರು ನೋಡಿ ಗಮನಿಸುವರೋ ಇಲ್ಲವೋ, ಗಮನಿಸದಿರುವವರಿಗೆ ತಾನಾಗಿಯೇ ಮೇಲೆಬಿದ್ದು ಕಾಣಿಸಿಕೊಳ್ಳುವುದೇ ಎಂದು ಅನುಮಾನಿಸಿ, ಕೂನೆಗೆ "ಹೇಗಾದರೂ ಆಗಲಿ, ನೋಡಿಯೇ ಬಿಡುವುದು" ಎಂದು ನಿಶ್ಚಯಿಸಿ, ಹೆದರಿ ನಾಚಿ ಮೆಲ್ಲನೆ ಇಣಿಕಿ ನೋಡುವಂತೆ ಗಾಳಿಯು ಎಲೆಗಳನ್ನು ಅಲುಗಿಸಿದಾಗ ಈ ಹೂವು ಕಣ್ಣಿಗೆ ಬೀಳುವುದು. ಭೂಮಿಯನ್ನು ಸಮಮಾಡಿ ಈ ಹೂವಿನ ಗಿಡವನ್ನು ನೆಟ್ಟವರಿಲ್ಲ; ಅದಕ್ಕೆ ನೀರೆರೆದು ಪ್ರೀತಿಯಿಂದ ಸಾಕಿದವರಿಲ್ಲ; ಅದು ಬೆಳೆದು ಹೂವು ಬಿಟ್ಟಾಗ ನೋಡಿ ಸಂತೋಷಿಸುವವರಿಲ್ಲ. ಆ ಹೂವಿಗೆ ಕವಿಯ ಹೊಗಳಿಕಯಿಲ್ಲ, ಸುಂದರಿಯರ ಕೇಶರಾಶಿಯನ್ನಲಂಕರಿಸುವ ಪುಣ್ಯವೂ ಇಲ್ಲ. ಮುಳ್ಳುಗಿಡಗಳ ದೆಸೆಯಿಂದ ತಂಗಾಳಿಯೊಡನೆ ಚಕ್ಕಂದವಾಡುವ ಪುಣ್ಯ ಸಹ ಇಲ್ಲದೆ ಹೋಗಬಹುದು. ಆದರೂ ಜನರು ತನ್ನನ್ನು ಗಮನಿಸಲಿ ಬಿಡಲಿ, ಅದು ಅರಳಿ ಪ್ರಕೃತಿಯು ತನಗೆ ಕೊಟ್ಟಷ್ಟು ಪರಿಮಳವನ್ನು ಆ ನಿರ್ಜನ ವಾತಾವರಣಕ್ಕೆ ಬೀರುತ್ತಿರುವುದು. ನಿಷ್ಕಾಮಕರ್ಮಿಯೆಂದರೆ ಈ ಹೂವು. ಹೂವುಗಳ ಸೌಂದರ್ಯವನ್ನೂ ಸುವಾಸನೆಯನ್ನೂ ಗಿಡದ ಮೇಲೆಯೇ ನೋಡಿ ಅನುಭವಿಸಬೇಕಲ್ಲದೆ ಅವನ್ನು ಕಿತ್ತು ಬಾಡಿಸಬಾರದೆಂದು ಎಲ್ಲರೂ ಹೇಳುವರು. ನಾವು ತೋಟಗಳಲ್ಲಿಯೂ ಮನೆಗಳಲ್ಲಿಯೂ ಬೆಳೆಯಿಸುವ ಹೂವುಗಳ ವಿಷಯದಲ್ಲಿ ಈ ಮಾತು ನಿಜವೇ. ಆದರೆ ತಬ್ಬಲಿ ಮಗುವಿನಂತಿದ್ದ ಆ ಬೆಟ್ಟದ ಹೂವನ್ನು ನೋಡಿದಾಗ ಅದು ಕಾಡಿನಲ್ಲಿ ಒಂಟಿಯಾಗಿದ್ದು ಬೇಸರಗೊಂಡು ತನ್ನನ್ನು ಯಾರಾದರೂ ಕೊಯ್ದು ಆದರಿಸಲೆಂದು ಆಸೆಪಡುತ್ತಿರುವುದೇನೋ ಎಂಬ ಹುಚ್ಚು ಭಾವನೆ ನನ್ನ ಮನಸ್ಸಿಗೆ ಬಂದಿತು.

ಮಲೆನಾಡಿನ ಕಾಡಿನಲ್ಲಿ ಬೆಳೆಯುವ ಹೂವುಗಳಿಗೆ ಸಾಧಾರಣವಾಗಿ ಇಷ್ಟು ಲಜ್ಜೆಯಿಲ್ಲ, ಸ್ನೇಹವನ್ನು ಬೇಡುವ ಈ ಮುಗುಳುನಗೆಯಿಲ್ಲ. ಅವು ಪ್ರಕೃತಿದೇವಿಯ ಸ್ವಂತ ಮಕ್ಕಳು. ದೇವಿಯ ಪ್ರೇಮರಸದಿಂದ ಮತ್ತರಾಗಿ, "ನಮ್ಮ ಸೌಂದರ್ಯವನ್ನು ನೋಡಿ ಮೋಹಗೊಳ್ಳದಿರುವವರಾರು" ಎಂಬ ಗರ್ವದಿಂದ ನಮ್ಮನ್ನು ದಿಟ್ಟಿಸಿ ನೋಡುವುವು ಕೆಲವು; ಕೆಂಡದಂತಿರುವ ತಮ್ಮ ಕಣ್ಣುಗಳಿಂದ ಕಿಡಿಗಳನ್ನು ಕಾರುತ್ತಿರುವುವು ಮತ್ತೆ ಕೆಲವು. ಅಂತೂ ನಮ್ರತೆಯೂ ದೈನ್ಯವೂ ಅಪರೂಪ. ಕಾಡಿನ ಹಿನ್ನೆಲೆಯಲ್ಲಿ ಆ ಹೂವುಗಳನ್ನು ಚಿತ್ರಿಸಿಕೊಂಡರೆ ಅವುಗಳ ಸೌಂದರ್ಯವು ನಿಜವಾಗಿಯೂ ನಮ್ಮನ್ನು ಸೆರೆಹಿಡಿಯುವುದು. ಆ ಸಾಂದ್ರವಾದ ಕಾಡಿನಲ್ಲಿ ಗಗನವನ್ನು ಮುಟ್ಟುವಷ್ಟು ಎತ್ತರವಾಗಿರುವ ಮರಗಳು; ಎರಡು ಹೆಜ್ಜೆಯ ಮುಂದೆ ಕಾಣದಿರುವಷ್ಟು ದಟ್ಟವಾಗಿ ಬೆಳೆದಿರುವ ಎಲೆಗಳ ಸಾಮ್ರಾಜ್ಯ; ಸೂರ್ಯನ ಕಿರಣಗಳನ್ನು ತಡೆಗಟ್ಟಿದ್ದರಿಂದ ಉಂಟಾದ ನಡುಹಗಲಿನ ಹಸುರುಗತ್ತಲೆ; ಸಣ್ಣ ಮಿಡತೆಗಳ ಸಂತತವಾದ ಝೇಂಕಾರವನ್ನೂ ಆಗಾಗ ಕೇಳಿಬರುವ ಪಕ್ಷಿಗಳ ಕೂಗನ್ನೂ ಗಾಳಿಯ ಸುಯ್ಯಲನ್ನೂ ಬಿಟ್ಟರೆ ಸುತ್ತಲೂ ಇರುವ ನಿಶ್ಶಬ್ದತೆ—ಇವೆಲ್ಲವೂ ಮನಸ್ಸಿಗೆ ಒಂದು ವಿಧವಾದ ದಿಗಿಲನ್ನುಂಟುಮಾಡುತ್ತವೆ. ಆಗ ಅಲ್ಲಲ್ಲಿ ವಿಧವಿಧವಾದ ಹೂವುಗಳಿರುವುದನ್ನು ನೋಡಿದರೆ ಮನಸ್ಸಿಗೆ ಸ್ವಲ್ಪ ಹರ್ಷವಾಗುತ್ತದೆ. ಆದರೆ ಅಲ್ಲಿಯ ಹೂವುಗಳೆಲ್ಲವೂ ಹರ್ಷವುಂಟುಮಾಡುವಂಥವಲ್ಲ. ಮುತ್ತುಗದ ಮರದಂಥ ಕೆಲವು ಮರಗಳ ತುಂಬ ಕೆಂಪಗೆ ರಕ್ತಸಿಕ್ತವಾದ ಹೂವುಗಳಿರುವುವು. ಇನ್ನು ಕೆಲವು ಗಿಡಗಳಲ್ಲಿ ರಕ್ತಪಾನಮಾಡಿ ದಾಹ ತೀರದೆ ಮತ್ತೆ ಚಾಚಿರುವ ಕ್ರೂರಮೃಗಗಳ ನಾಲಗೆಗಳಂತಿರುವ ಎಲೆಗಳು ತುಂಬಿರುವುವು. ಅವನ್ನು ನೋಡಿದರೆ ಕಣ್ಣಿಗೆ ರಾಳಿ ಬಡಿದಂತಾಗಿ ದಿಗಿಲು ಹೆಚ್ಚುವುದು. ಅನಂತರ ಸ್ವಲ್ಪ ಸೌಮ್ಯವಾಗಿ ಸುಂದರವಾಗಿರುವ ಹೂವುಗಳು ಕಣ್ಣಿಗೆ ಬಿದ್ದರೂ ನಮ್ಮ ದಿಗಿಲು ಹೋಗದು. ಆ ಹೂವುಗಳ ಅಂದವನ್ನು ಮರೆತು ಪರೀಕ್ಷಿಸಿದರೆ ಅವುಗಳಲ್ಲಿ ಮಕರಂದವೇ ಇರುವುದೋ ವಿಷವೇ ಇರುವುದೋ ಬಲ್ಲವರು ಯಾರು! ಬಿಳಿಗಿರಿರಂಗನ ಬೆಟ್ಟದ ಕಾಡಿನಲ್ಲಿ ಅಲ್ಲಲ್ಲಿಯೇ ಮರಗಳ ನೆರಳಿನಲ್ಲಿ ಒಂಟಿಒಂಟಿಯಾಗಿ ಬೆಳೆಯುವ ಒಂದು

ಹೂವನ್ನು ನೋಡಿದೆವು. ಎಣ್ಣೆಗೆಂಪಿನಿಂದ ಬಿಳುಪಿನವರೆಗೂ ಐದಾರು ಬಣ್ಣಗಳ ಮೃದುವಾದ ಹತ್ತು ಹನ್ನೆರಡು ಪತ್ರಗಳುಳ್ಳ ಹೂವು. ನಾವು ಅದರ ಮಾಟವನ್ನೂ ವರ್ಣಸಂಪತ್ತಿಯನ್ನೂ ನೋಡಿ ಆಶ್ಚರ್ಯಪಡು ತ್ತಿದ್ದಾಗ ನಮ್ಮ ಜೊತೆಯಲ್ಲಿದ್ದ ಸೋಲಿಗನು ಅದರ ರಸವು ತೀಕ್ಷ್ಣವಾದ ವಿಷವೆಂದು ಹೇಳಿದನು. ಅದನ್ನು ಕೇಳಿದ ಮೇಲೆ ಆ ಹೂವನ್ನು ನೋಡಿದರೆ ನಮ್ಮ ವಿಷಕನ್ಯೆಯರ ಅಥವಾ ಗ್ರೀಕರ ಸೈರೆನ್ನಿನ ಜ್ಞಾಪಕ ಬರುತ್ತಿತ್ತು. ಮತ್ತೆ ಕೆಲವು ವೇಳೆ, ಅರಣ್ಯದಲ್ಲಿ ಯಾವುದೋ ಒಂದು ಕ್ರೂರದೇವತೆಯು ವಾಸಿಸುವುದೆಂದೂ, ಈ ಹೂವುಗಳು ತಮ್ಮ ಸೌಂದರ್ಯದಿಂದ ನಮ್ಮನ್ನು ಸೆಳೆದು ವಶಪಡಿಸಿಕೊಂಡು ಆ ದೇವತೆಗೆ ಬಲಿಕೊಡುವುವೆಂದೂ ಭಯ ಹುಟ್ಟುವುದು.

'ನಾಗರಿಕ' ಹೂವುಗಳನ್ನು ನೋಡಿದಾಗ ಮನಸ್ಸಿನಲ್ಲಿ ಹುಟ್ಟುವ ಭಾವನೆಗಳೇ ಬೇರೆ. ಮೊದಲು ಕಮಲದ ನೆನಪಾಗುವುದು. ಕಮಲವು ಏನೋ ಒಂದು ಬಗೆಯ ಗಾರುಡೀ ವಿದ್ಯೆಯಿಂದ ಕವಿಗಳ ಮತ್ತು ಸಾಧಾರಣ ಜನರ ಮನಸ್ಸು ಬೇರೊಂದುಕಡೆ ಹೋಗದಂತೆ ಮಾಡಿಕೊಂಡಿದೆ ಎಂದು ನನಗೆ ಸ್ವಲ್ಪ ದಿನ ಇತರ ಹೂವುಗಳ ಪರವಾಗಿ ಅದರ ಮೇಲೆ ಮತ್ಸರವಿತ್ತು. ಆದರೆ ಕಮಲವನ್ನು ಮರೆಯುವುದು ಹೇಗೆ! ಉಪೇಕ್ಷಿ ಸುವುದು ಹೇಗೆ! ಅದು ನಮ್ಮ ಸಾಹಿತ್ಯದಲ್ಲಿ ಮಾತ್ರವೇ ಅಲ್ಲ, ನಮ್ಮ ಜೀವನದಲ್ಲಿಯೇ ಸೇರಿಹೋಗಿದೆ; ನಮ್ಮ ಸೌಂದರ್ಯಕಲ್ಪನೆಯಲ್ಲಿ ಕಮಲದ ಲಾವಣ್ಯವೂ ಒಂದು ಅಂಶವಾಗಿ ಹೋಗಿದೆ. ಸ್ತ್ರೀಯರಿಗೆ ಕಮಲದ ಹೆಸರನ್ನು ಸಾವಿರಸಲ ಇಟ್ಟರೂ ನಮಗೆ ತೃಪ್ತಿಯಿಲ್ಲ. ಈಚೆಗೆ ಕೆಲವರೇನೋ ಆ ಹೆಸರನ್ನು ಕೇಳಿದರೆ ಜುಗುಪ್ಸೆಪಡುವರು. ಅವರಿಗೆ ಕಮಲವು ಹೂವಲ್ಲ, ತಮ್ಮ ನಲ್ಲೆಯಲ್ಲ, ಬರಿಯ ಶಬ್ದಮಾತ್ರವಾಗಿದೆ. ಆದರೆ ಬರಿಯ ಶಬ್ದವಾದರೂ ಎಷ್ಟು ಮಧುರವಾದ ಶಬ್ದ!

ಗುಲಾಬಿ ಪರದೇಶದ ಹೂವಾದರೂ ಇಲ್ಲಿ ಒಂದು ರಾಜ್ಯವನ್ನು ಕಟ್ಟಿದೆ. ಅದನ್ನು ನೋಡಿದಾಗ ಮನಸ್ಸು ಈ ಪ್ರಪಂಚವನ್ನು ಬಿಟ್ಟು ಬೇರೊಂದು ಕಲ್ಪನಾ ಪ್ರಪಂಚವನ್ನು, 'ರೊಮಾನ್ಸ್' ಪ್ರಪಂಚವನ್ನು ಪ್ರವೇಶಿಸಿ ಅಲೆಯತೊಡಗುವುದು. ಗುಲಾಬಿಯ ಆವರಣವೇ 'ರೊಮಾನ್ಸ್'

ಬೇಕು, ಹೆಸರನ್ನು ಬರೆದೇ ತೀರುತ್ತೇನೆ ಎಂದು ನನ್ನ ಹಟ. ಈ ಜಗಳ ಪೂರೈಸುವುದರೊಳಗೆಯೇ ಅವಳು ಪುಸ್ತಕದ ಮೇಲೆ ನನ್ನ ಹೆಸರು ಬರೆದಿಟ್ಟುಬಿಟ್ಟಳು. ನಾನು ಅದರ ಹಿಂದೆ 'ಮಿಸೆಸ್' ಎಂದು ಸೇರಿಸಿದ್ದನ್ನು ನೋಡಿ ಅವಳು ರೇಗಿಕೊಂಡು ತಾನು ಇಂಗ್ಲಿಷ್ ಕಲಿಯುವುದಿಲ್ಲವೆಂದೂ ಯಾರಾದರೂ ಮಾನಗೆಟ್ಟವರನ್ನು ಕರೆತಂದು ಪಾಠ ಹೇಳಬಹುದೆಂದೂ ಹೇಳತೊಡಗಿದಳು. ವಿದ್ಯಾಭ್ಯಾಸ ಮುಂದುವರಿಯುವುದಕ್ಕೆ ಬದಲಾಗಿ ಈ ಜಗಳದಲ್ಲೇ ಮೂರು ದಿನ ಕಳೆದುಹೋಯಿತು. ಆದರೂ ಆ ಕಾಲ ತೀರ ವ್ಯರ್ಥವಾಗಲಿಲ್ಲ. 'ಸಿಲ್ಲಿ, ಸ್ಟುಪಿಡ್' ಮುಂತಾದ ಕೆಲವು ಪದಗಳನ್ನು ಲಲಿತೆ ನನ್ನಿಂದ ಕಲಿತು, ಅವುಗಳನ್ನು ಅಪಾತ್ರದಲ್ಲಿ ಉಪಯೋಗಿಸ ಬಾರದೆಂದು ಎಷ್ಟು ಬಗೆ ಹೇಳಿದರೂ ಕಿವಿಗೆ ಹಾಕಿಕೊಳ್ಳದೆ ನನ್ನ ಮೇಲೆಯೇ ಪ್ರಯೋಗಿಸಿದಳು. ಕೊನೆಗೆ ಲಲಿತೆಯು ಹೆಸರಿನ ಕೆಳಗೆ ಐದು ವರ್ಷದ ಹಿಂದಿನ ತಾರೀಖನ್ನು ಹಾಕಿದ್ದಲ್ಲದೆ ನನ್ನ ಕೆಲವು ನೋಟ್ ಪುಸ್ತಕಗಳನ್ನೂ ಹೊಸದಾಗಿ ಕೊಂಡಿದ್ದ ಫೌಂಟನ್‌ಪೆನ್ನನ್ನೂ ಲಂಚವಾಗಿ ಕೊಟ್ಟಮೇಲೆ ಈ ಜಗಳ ಕೊನೆಗಂಡಿತು.

ಲಲಿತೆಗೆ ನಿಜವಾಗಿಯೂ ಪ್ರಪಂಚ ಪರಿಚಯವಾಗಬೇಕಾದರೆ ಸಾಹಿತ್ಯವೊಂದು ಒಂದರೆ ಸಾಲದೆಂದು ತೋರಿ ಭೂವಿವರಣೆ ಚರಿತ್ರೆಗಳನ್ನೂ ನನ್ನ ಪಾಠಕ್ರಮದಲ್ಲಿ ಸೇರಿಸಿಕೊಂಡಿದ್ದೆನು. ಆದರೆ ಪ್ರಾರಂಭವಾದ ಮೇಲೆ ಸ್ವಲ್ಪ ದಿನಗಳಲ್ಲಿಯೇ ಇವರಡರಿಂದ ಬಹಳ ತೊಂದರೆಯಾದ್ದರಿಂದ ನಾನಾಗಿಯೇ ಅವುಗಳನ್ನು ನಿಲ್ಲಿಸಬೇಕಾಯಿತು. ಊಟಕ್ಕೆ ಕುಳಿತಾಗ ಅಥವಾ ಎಲೆ ಅಡಿಕೆ ಹಾಕಿಕೊಳ್ಳುವಾಗ ನಿಮ್ಮ ಹೆಂಡತಿ—ನಿಮ್ಮನ್ನು ಪರೀಕ್ಷಿಸುವುದಕ್ಕೋ ಬರಿಯ ಕುತೂಹಲದಿಂದಲೋ—"ಕಿಲಿಮಂಜೇರೋ ಎಲ್ಲಿದೆ?" ಎಂದು ಕೇಳಿದರೆ ನಿಮ್ಮ ಗತಿ ಏನಾಗಬೇಕು? ಅಂಥ ಪ್ರಶ್ನೆಗಳಿಗೆ ಉತ್ತರಕೊಡಲಾರದೆ ನೀವು ನಂಬರು ಕಳೆದುಕೊಂಡು ಈಗಾಗಲೇ ಹತ್ತು ಹದಿನೈದು ವರ್ಷಗಳಾಗಿರಬೇಕು. ಇನ್ನೂ ಅದೆಲ್ಲಾ ಮನಸ್ಸಿನಲ್ಲಿ ನಿಲ್ಲಬೇಕೆಂದರೆ ಹೇಗೆ! ಲಲಿತೆಯ ಜೊತೆಗೆ ಹೆಜ್ಜೆಹೆಜ್ಜೆಗೂ ನಾನು ಭೂವಿವರಣೆ ಚರಿತ್ರೆಗಳನ್ನು ಅಭ್ಯಾಸಮಾಡುವುದು ಸಾಧ್ಯವಾಗಿ ತೋರಲಿಲ್ಲ. ಆದ್ದರಿಂದ "ನಿನಗೆ ಮನೆಗೆಲಸಗಳನ್ನು ಮಾಡಿಕೊಂಡು

ಇದನ್ನೆಲ್ಲಾ ಓದುವುದಕ್ಕಾಗುವುದಿಲ್ಲ, ಸದ್ಯಕ್ಕೆ ಇಂಗ್ಲಿಷೊಂದು ಸಾಕು" ಎಂದು ಹೇಳಿಬಿಟ್ಟೆ.

ಇನ್ನು ಇಂಗ್ಲಿಷು ಪಾಠಕ್ಕೆ ಸರಿಯಾದ ಕಾಲವನ್ನು ಕಂಡುಹಿಡಿಯುವ ಕೆಲಸವೊಂದು ಉಳಿಯಿತು. ಉಷ್ಣವಲಯದಲ್ಲಿ ಮೆದುಳಿನ ಕೆಲಸಮಾಡು ವವರಿಗೆ ಪ್ರಾತಃಕಾಲವೇ ಅತ್ಯುತ್ತಮವಾದದ್ದೆಂಬ ವೈಜ್ಞಾನಿಕರ ನಿರ್ಣಯ ವನ್ನು ಮೂಲೆಗೆ ತಳ್ಳಿ ಲಲಿತೆ "ನಾನು ಮೆದುಳಿನ ಕೆಲಸಕ್ಕೆ ಕುಳಿತರೆ ಮುಸುರೆ ಕೆಲಸವನ್ನು ನೀವು ಮಾಡುತ್ತೀರಾ?" ಎಂದಳು. ಬೆಳಗ್ಗೆಯೆಲ್ಲಾ ಅವಳಿಗೆ ಮನೆಗೆಲಸ ಏನಾದರೂ ಇದ್ದೇ ಇರುವುದು; ಮಧ್ಯಾಹ್ನವೆಲ್ಲಾ ನಾನು ಮನೆಯಲ್ಲಿರುವುದಿಲ್ಲ; ಸಂಜೆ ಟೆನಿಸ್ಸಿಗೆ ಹೋಗಬೇಕು—ಈ ಮಧ್ಯೆ ನಮ್ಮ ಶಾಲೆಗೆ ಕಾಲ ಸಿಕ್ಕುವುದೇ ಕಷ್ಟವಾಯಿತು. "ನಿನ್ನ ಮನೆಗೆಲಸ ಅಷ್ಟರಲ್ಲೇ ಇದೆ, ಬೆಳಗ್ಗೆ ಪುರಸತ್ತು ಮಾಡಿಕೊ" ಎಂದು ಲಲಿತೆಗೆ ಹೇಳಿದರೆ ಅವಳು "ನೀವು ಟೆನಿಸ್ ಬಿಟ್ಟುಬಿಡಿ, ಆಡುವುದು ಅಷ್ಟರಲ್ಲೇ ಇದೆ, ನಾನು ಬೇಕಾದರೂ ನಿಮ್ಮನ್ನು ಸೋಲಿಸುತ್ತೇನೆ" ಎನ್ನುತ್ತಾಳೆ. "ಆದಾಗದಿದ್ದರೆ ಬೆಳಗಿನ ಜಾವಕ್ಕೆ ಬೇಕಾದರೆ ಏಳುತ್ತೇನೆ. ನಿಮಗೆ ಎಚ್ಚರ ವಾಗದಿದ್ದರೆ ಮುಖಕ್ಕೆ ತಣ್ಣೀರೆರಚಿ ಎಚ್ಚರಿಸುತ್ತೇನೆ" ಎಂದು ಲಲಿತೆ ಭರವಸೆಯನ್ನೇನೋ ಕೊಟ್ಟಳು. ಆದರೂ ನನಗೇಕೋ ಅದು ರುಚಿಸಲಿಲ್ಲ. ಕೊನೆಗೆ ರಾತ್ರಿ ಊಟವಾದ ಮೇಲೆ ಪಾಠ ಹೇಳಿಕೊಡುವುದೆಂದು ನಿಶ್ಚಯ ವಾಯಿತು. ಲಲಿತೆ ಇಂಗ್ಲಿಷ್ ಕಲಿಯುವುದು ಯಾರಿಗೂ ತಿಳಿಯ ಕೂಡದೆಂದು ಬೇರೆ ಗೊತ್ತುವಳಿಯಿದ್ದದ್ದರಿಂದ ರಾತ್ರಿಯೇ ಅತ್ಯುತ್ತಮ ವಾದ ಕಾಲವೆಂದು ಅವಳೂ ಒಪ್ಪಿದಳು. ನನಗೆ ಮಾತ್ರ ಲಲಿತೆ ಆಗ ಎಲ್ಲಿ ತೂಕಡಿಸುವಳೋ ಎಂದು ಹೆದರಿಕೆ; ಆ ತೂಕಡಿಕೆ ನನ್ನ ಶಿಕ್ಷಣದ ಮಹಿಮೆಯೆಂದು ಎಲ್ಲಿ ಹೇಳುವಳೋ ಎಂದು ಮತ್ತೂ ಹೆದರಿಕೆ. ಹಾಗೆ ಹೇಳುವುದಿಲ್ಲವೆಂದೂ ಹಲ್ಲುಕಚ್ಚಿಕೊಂಡು ಸುಮ್ಮನಿರುವುದಾಗಿಯೂ ಅವಳು ಮಾತುಕೊಟ್ಟಮೇಲೂ ನನ್ನ ಮನಸ್ಸಿಗೆ ಅಷ್ಟೇನೂ ಸಮಾಧಾನ ವಾಗಲಿಲ್ಲ.

ಪ್ರಾರಂಭೋತ್ಸವದ ದಿನ ಬಂತು. ಆ ದಿನ ಸಂಜೆ ನಾನು ಮನೆಗೆ ಬರುವ ವೇಳೆಗೆ ನನ್ನ ಮೇಜಿಗೆ ಸ್ಥಾನ ಭ್ರಷ್ಟತ್ವವಾಗಿತ್ತು. ನಾನು ಅದರ

ಮೇಲೆ ಯಾವುದೋ ಕ್ರಮವನ್ನನುಸರಿಸಿ ಜೋಡಿಸಿದ್ದ ಪುಸ್ತಕಗಳು ಒಂದೊಂದು ಒಂದೊಂದು ಕಡೆ ಕಿಟಕಿಯ ಗೂಡು ಮುಂತಾದ ಸ್ಥಳಗಳನ್ನು ಅಲಂಕರಿಸಿದ್ದುವು. ರೂಮಿನ ಮಧ್ಯೆ ಮೇಜು, ಅದಕ್ಕೆ ಎರಡು ಕಡೆಗಳಲ್ಲೂ ಎದುರು ಬದರಾಗಿ ಒಂದೊಂದು ಕುರ್ಚಿ, ಮೇಜಿನ ಮೇಲೆ ಲಲಿತೆಯ ನೋಟು ಪುಸ್ತಕಗಳು, ಫೌಂಟನ್‌ಪೆನ್, ಮೇಜಿನ ದೀಪ, ಇತ್ಯಾದಿ. ಈ ಅವಾಂತರವೆಲ್ಲಾ ಏಕೆಂದು ಕೇಳಿದ್ದಕ್ಕೆ ಶಾಲೆಯ ಆವರಣ ಸರಿಯಾಗಿರ ಬೇಕೆಂದೂ ಉಪಾಧ್ಯಾಯನಿಗೂ ಶಿಷ್ಯೆಗೂ ನಡುವೆ ಒಂದು ಮೇಜಿದ್ದರೆ ಒಳ್ಳೆಯದೆಂದೂ ಉತ್ತರ ಬಂತು. ಒಂದು ಮೂಲೆಯಲ್ಲಿ ಕಾಲುಮಣೆಯನ್ನು ಹಾಕಿ ಅದರ ಮೇಲೆ ನಾಲ್ಕೈದು ಪುಸ್ತಕಗಳನ್ನಿಟ್ಟು ಪೂಜೆಮಾಡಿ ಚರಪಿ ಗಾಗಿ ಮಾಡಿದ್ದ ಕೊಬ್ಬರಿ ಸಕ್ಕರೆಯನ್ನು ನನಗೂ ಸ್ವಲ್ಪ ಉಳಿಸಿದ್ದಳು. ಅದರ ಕಡೆ ನನ್ನ ಗಮನ ಹೋಗುವುದಕ್ಕಿಂತ ಮುಂಚೆ ಕಾಲುಮಣೆಯ ಮೇಲಿನ ಪುಸ್ತಕಗಳನ್ನು ನೋಡಿದರೆ, ಅವೆಲ್ಲಾ ನಾನು ಲೈಬ್ರೆರಿಯಿಂದ ತಂದ ಬೆಲೆ ಬಾಳುವ ಪುಸ್ತಕಗಳು. "ಇವನ್ನೇಕೆ ತೆಗೆದೆ? ಎಲ್ಲಾ ಅರಿಸಿನಕುಂಕುಮ ಆಗಿಹೋಯಿತಲ್ಲ! ನಿನ್ನ ಪುಸ್ತಕ ಇಡಬಾರದಾಗಿತ್ತೆ?" ಎಂದು ಕೇಳಿದ್ದಕ್ಕೆ ಲಲಿತೆ ನನ್ನ ಪಾಲಿನ ಕೊಬ್ಬರಿ ಸಕ್ಕರೆಯನ್ನು ಸ್ವಲ್ಪ ಸ್ವಲ್ಪವಾಗಿ ಬಾಯಿಗೆ ಹಾಕಿಕೊಳ್ಳುತ್ತಾ "ನನ್ನ ಪುಸ್ತಕ ಕೊಳೆಯಾಗಿಹೋಗುತ್ತೆ ಅಂತ ಅದನ್ನೇ ಇಟ್ಟೆ" ಎಂದಳು. ಸತ್ಯಸಂಧೆ, ನನ್ನ ಲಲಿತೆ. ನನಗೆ ಏನು ಹೇಳುವುದಕ್ಕೂ ತೋರಲಿಲ್ಲ. ಅಷ್ಟುಹೊತ್ತಿಗೆ ಕೊಬ್ಬರಿ ಸಕ್ಕರೆಯೆಲ್ಲಾ ಅದೃಶ್ಯವಾಗಿ ಲಲಿತೆಯ ತುಟಿಯಮೇಲೆ ಸ್ವಲ್ಪ ಮಾತ್ರ ಕಾಣುತ್ತಿತ್ತು. ನನಗೆ ಚರಪು ಸಿಕ್ಕಿದ್ದು ಅಷ್ಟೇ.

ಲಲಿತೆ ಇಂಗ್ಲಿಷ್ ಅಕ್ಷರಗಳನ್ನು ಇನ್ನೂ ಮರೆತಿರಲಿಲ್ಲವಾದ್ದರಿಂದ ನಾವು ನೇರವಾಗಿ ಪ್ರಥಮ ಪುಸ್ತಕವನ್ನೇ ಪ್ರಾರಂಭಿಸಿದೆವು. ಆ ದಿನದ ಪಾಠ ಬಹಳ ಚೆನ್ನಾಗಿ ನಡೆಯಿತೆಂದೇ ಹೇಳಬೇಕು. ಪಾಠ ಹೇಳುವುದು ನನಗೆ ಹೊಸದು, ಕಲಿಯುವುದು ಅವಳಿಗೆ ಹೊಸದು; ಆದ್ದರಿಂದ ಇಬ್ಬರಿಗೂ ಹೊಸ ಅನುಭವ, ಹೊಸ ಹುರುಪು. ಆ ದಿನ ನಾಲ್ಕು ಪಾಠಗಳನ್ನು ಮುಗಿಸಿಬಿಟ್ಟೆವು. ಲಲಿತೆಗಂತೂ ಪಾಠಗಳನ್ನು ಸುಲಭವಾಗಿ ಅರ್ಥ ಮಾಡಿಕೊಂಡೆನೆಂದು ಮಿತಿಯಿಲ್ಲದ ಹೆಮ್ಮೆ. "ಇನ್ನು ಎರಡು ಮೂರು

ತಿಂಗಳಲ್ಲಿ ಸಣ್ಣ ಸಣ್ಣ ಕಥೆಗಳನ್ನು ಓದಿಸಬಹುದು, ಒಂದು ವರ್ಷವಾದ ಮೇಲೆ ಅವಳೊಡನೆ ರೋಮಿಯೋ ಜೂಲಿಯೆಟ್ ನಾಟಕವನ್ನೂ ಷೆಲ್ಲಿಯ ಗೀತೆಗಳನ್ನೂ ಓದಬಹುದು'' ಎಂದುಕೊಂಡು ನಾನೂ ಬಹಳ ಸಂತೋಷ ಪಟ್ಟೆನು.

ಮೂರನೆಯ ದಿನ ಗ್ರೆಟಾಗಾರ್ಬೊ ಪಾತ್ರವಹಿಸಿದ್ದ ಪ್ರಸಿದ್ಧ ಚಿತ್ರ ವೊಂದರ ಕೊನೆಯ ಪ್ರದರ್ಶನ. ಸಂಜೆ ಬೇರೆ ಕೆಲಸವಿದ್ದುದ್ದರಿಂದ ನನ್ನ ಸ್ನೇಹಿತರೆಲ್ಲರೂ ರಾತ್ರಿಯ ಪ್ರದರ್ಶನಕ್ಕೆ ಹೋಗಬೇಕೆಂದು ನಿಶ್ಚಯಿಸಿ ನಾನೂ ಬಂದೇತೀರಬೇಕೆಂದು ಬಲವಂತಮಾಡಿದರು. ಆದರೆ ಲಲಿತೆಯ ವಿದ್ಯಾಭ್ಯಾಸಕ್ಕೆ ದ್ವಿತೀಯ ವಿಘ್ನವಾಗದಂತೆ ಶಾಸ್ತ್ರಕ್ಕಾದರೂ ಸ್ವಲ್ಪ ಹೊತ್ತು ಪಾಠ ಮಾಡಲೇಬೇಕು. ''ನಿನ್ನೆಯ ಪಾಠಗಳನ್ನು ಸ್ವಲ್ಪವಾದರೂ ಮರೆತಿರುತ್ತಾಳೆ, ಒಂದೆರಡು ಪ್ರಶ್ನೆಗಳನ್ನು ಕೇಳಿ ಮತ್ತೆ ಅದನ್ನೇ ಓದ ಹೇಳಬಹುದು'' ಎಂದುಕೊಂಡು ನಾನು ಮನೆಗೆ ಬಂದೆ. ಹೊತ್ತಿಗೆ ಸರಿಯಾಗಿ ಲಲಿತೆ ಪುಸ್ತಕ ತೆಗೆದುಕೊಂಡು ಬಂದಳು. ಒಂದು ನೋಟು ಪುಸ್ತಕದಲ್ಲಿ ಹಿಂದಿನ ದಿನದ ಪಾಠವನ್ನೂ ಅದರ ಅರ್ಥವನ್ನೂ ಸ್ವಲ್ಪವೂ ತಪ್ಪಿಲ್ಲದೆ ಬರೆದಿದ್ದಳು. ಅದನ್ನು ಓದುತ್ತ ಓದುತ್ತ ಗ್ರೆಟಾಗಾರ್ಬೋವಿನ ಚಿತ್ರ ದೂರದೂರಕ್ಕೆ ಸರಿಯಿತು. ಆದರೂ ನಿರಾಶನಾಗದೆ ಒಂದೆರಡು ಪ್ರಶ್ನೆಗಳನ್ನು ಕೇಳಿದರೆ ಅದಕ್ಕೂ ತೃಪ್ತಿಕರವಾದ ಉತ್ತರವೇ ಬಂತು. ನಾಯಿ ಬೆಕ್ಕಿನ ಕಡೆಗೆ ಓಡಿದ್ದನ್ನೂ ಹೇಂಟೆ ಬೆಕ್ಕನ್ನು ಎದುರುಗೊಂಡದ್ದನ್ನೂ ಲಲಿತೆ ಬಹು ಸೊಗಸಾಗಿ ಮುಂದಟ್ಟುಮಾಡಿಕೊಂಡಿದ್ದಳು. ನನಗೆ ಕೆಲವು ವೇಳೆ ಮಿಲ್ಟನ್, ಡಾಂಟೆ ಮೊದಲಾದವರ ಕಾವ್ಯಗಳಲ್ಲಿ ಸಹ ಆಸಕ್ತಿಯಿಲ್ಲದೆ ಹೋಗುತ್ತದೆ, ಲಲಿತೆಗೆ ಇಂಥ ಕೆಲಸಕ್ಕೆ ಬಾರದ ವಿಷಯಗಳಲ್ಲಿ ಅಭಿರುಚಿಯಿರುವುದನ್ನು ನೋಡಿ ನನಗೆ ಆಶ್ಚರ್ಯವೂ ಜುಗುಪ್ಸೆಯೂ ಆದುವು. ಈ ಬಗೆಯ ಪ್ರವರ್ತನೆಯುಳ್ಳ ಮನಸ್ಸಿಗೆ ಘನ ಸಾಹಿತ್ಯವು ಎಲ್ಲಾದರೂ ರುಚಿಸುವುದುಂಟೆ, ಈ ವಿದ್ಯಾಭ್ಯಾಸದ ಪ್ರಯತ್ನ ವನ್ನು ಬಿಟ್ಟುಬಿಡುವುದೇ ಒಳ್ಳೆಯದಲ್ಲವೆ? ಎಂಬ ಪ್ರಶ್ನೆಗಳು ತಲೆದೋರಿದುವು.....ದೂರದೃಷ್ಟಿಯಿಂದ ನೋಡಿದರೆ ಈ ಆರಂಭಶೂರತ್ವ ಖಂಡಿತ ಒಳ್ಳೆಯದಲ್ಲ. ಹೊಸದರಲ್ಲಿ ಆಗಸ ಗೋಣಿ ಒಗೆದಂತೆ. ಉತ್ಸಾಹ ಹೀಗೆ

ಮಿತಿಯಿಲ್ಲದೆ ಜ್ವಲಿಸಿದರೆ ಎಷ್ಟು ದಿನ ಬಾಳಿಕೆ ಬಂದೀತು!..ಅಂತೂ ಅಂದು ಸಿನಿಮಾಕ್ಕೆ ಹೋಗುವುದಕ್ಕೆ ಲಲಿತೆ ಕಲ್ಲುಹಾಕಿದಳು.

ಅಲ್ಲಿಂದಾಚೆಗೆ ಸಹ ನಾವು ಹಾಕಿಕೊಂಡಿದ್ದ ಕಾರ್ಯಕ್ರಮ ಸುಲಲಿತವಾಗಿ ನಡೆಯಲು ಸ್ವಲ್ಪ ಕಷ್ಟವೇ ಆಯಿತು. ಎಷ್ಟೋ ವೇಳೆ ಲಲಿತೆ ಮನೆಗೆಲಸಗಳನ್ನು ತೀರಿಸಿಕೊಂಡು ಬರುವ ವೇಳೆಗೆ ಮುಖದಲ್ಲಿ ಆಯಾಸ ತೇಲುತ್ತಿರುವುದು. ನನಗೆ ಉತ್ಸಾಹಭಂಗವಾಗದಿರಲೆಂದು ಅವಳು ಎಷ್ಟು ಪ್ರಯತ್ನಿಸಿದರೂ ಘಳಿಗೆಗೊಂದು ಸಲ ಆಕಳಿಕೆ ಬರುವುದು. ಆಗ ಪಾಠ ಹೇಳುವುದೆಂದರೆ ಕೇವಲ ಚಿತ್ರಹಿಂಸೆಯಾಗುವುದು. ಇನ್ನು ಕೆಲವು ದಿನ ತನಗೆ ಓದುವುದು ಇಷ್ಟವಿಲ್ಲದಿದ್ದರೆ, ಲಲಿತೆ ನನ್ನ ಮುಖವನ್ನು ನೋಡಿ ಅದರಲ್ಲಿ ನಾನು ಅನುಭವಿಸದ ಆಯಾಸವನ್ನು ಕಂಡು ಹಿಡಿಯುವಳು. ಅವಳಿಗೆ ಬೇಕಿಲ್ಲದೆ ಮನಸ್ಸು ಸಿದ್ಧವಿಲ್ಲದೆ ಇರುವಾಗ ಬಲವಂತ ಮಾಘಸ್ನಾನವೇಕೆಂದು ನಾನು ದಯೆ ತೋರಿ ಪುಸ್ತಕವನ್ನು ಮುಚ್ಚಿಬಿಡುತ್ತಿದ್ದೆ. ಇದಕ್ಕಾಗಿ ಲಲಿತೆ ಕೃತಜ್ಞತೆ ತೋರಿಸುವುದಕ್ಕೆ ಬದಲಾಗಿ ಹೇಗೋ ತಂತ್ರಮಾಡಿ ಪಾಠ ನಿಂತದ್ದಕ್ಕೆ ಜವಾಬ್ದಾರಿಯನ್ನು ನನ್ನ ಮೇಲೆಯೇ ಒರಗಿಸುತ್ತಿದ್ದಳು.

ಹೀಗೆ ಎರಡು ಮೂರು ತಿಂಗಳು ಶಿಕ್ಷಣ ಜರುಗುವುದರಲ್ಲಿ ನಾನು ಲಲಿತೆಗೆ ವಿದ್ಯೆ ಕಲಿಸುವುದು ಸಾಧ್ಯವೆ ಎಂಬ ಸಂದೇಹ ಬರಲಾರಂಭಿಸಿತು. ಆ ಉಪಾಧ್ಯಾಯ–ಶಿಷ್ಯೆ ಸಂಬಂಧವೇ ಬಹು ವಿಚಿತ್ರವಾಗಿ ತೋರಿತು. ಪಾಠ ಹೇಳಿಕೊಡುವಾಗ ನಗುನಗುತ್ತ ಇರಬೇಕೆ ಅಥವಾ ಗಂಭೀರ ಮುದ್ರೆಯನ್ನು ತಾಳಬೇಕೆ? ನನಗೇನೋ ಪುಸ್ತಕವನ್ನು ತೆರೆದೊಡನೆ ಎಲ್ಲೂ ಇಲ್ಲದ ಗಾಂಭೀರ್ಯ ಬಂದುಬಿಡುತ್ತಿತ್ತು. ಆ ಮುಖಮುದ್ರೆಯನ್ನು ಮುರಿದು ಎಂದಿನಂತೆ ಸಲಿಗೆಯಾಗಿದ್ದರೆ ಶಾಲೆಯ ಆವರಣವೇ ಕೆಟ್ಟುಹೋಗಬಹುದು. ಇದಲ್ಲದೆ ಮೇಷ್ಟರ ಕೆಲಸಕ್ಕೆ ಅರ್ಹನೆಂಬ ನಂಬಿಕೆಯೇ ನನಗಿರಲಿಲ್ಲ. ಲಲಿತೆ ಅಪ್ರಬುದ್ಧಳು, ನಾನು ವಿದ್ಯಾವಂತ; ನಾನು ಹೇಳಿದ್ದೇ ಅವಳಿಗೆ ವೇದವಾಕ್ಯ. ಆದರೂ ಅವಳೆದುರಿಗೆ ಕುಳಿತಾಗ ನನಗೆ ಪರೀಕ್ಷಕನ ಮುಂದೆ ನಿಂತ ಹುಡುಗನ ಅನುಭವವಾಗುತ್ತಿತ್ತು. ಅದಕ್ಕೆ ತಕ್ಕಹಾಗೆ ಲಲಿತೆಯ ಪ್ರಶ್ನೆಗಳು ಕೆಲವುವೇಳೆ ಬಹಳ ತೊಂದರೆ

ಕೊಡುತ್ತಿದ್ದವು. ನಾನು ಬುದ್ಧಿವಂತನೇ ಹೌದಾದರೂ ಲಲಿತೆಯ ಎದುರಿಗೆ ನನ್ನ ಬುದ್ಧಿಶಕ್ತಿಯನ್ನು ಪ್ರದರ್ಶಿಸುವುದು ಏಕೋ ಅಸಾಧ್ಯ ವಾಗುತ್ತಿತ್ತು. ಅವಳು ಈಗ ನನಗೆ ಪರಕೀಯಳಂತೆ ತೋರುತ್ತಿದ್ದಳು. ನಾವು ಯಾವಾಗಲೂ ದೂರದೂರ ಕುಳಿತು ಮಾತಾಡಿದ್ದಿಲ್ಲ. ಈಗ ನಮ್ಮಿಬ್ಬರ ನಡುವೆ ಒಂದು ಅನಿಷ್ಟ ಮೇಜು ನಿಂತಿತ್ತು. ಅದು ಬೇಡವೆಂದರೆ ಲಲಿತೆ ಕೇಳಳು. ಎಂದಿನಂತೆ ಹಸನ್ಮುಖಿಯಾಗಿರದೆ, ಮುಖ ದಲ್ಲಿ ಯಾವ ಭಾವವನ್ನೂ ಪ್ರಕಟಿಸದೆ ಆ ಮೇಜಿನ ಹಿಂದೆ ಪ್ರತಿಮೆ ಯಂತೆ ಕುಳಿತುಬಿಡುವಳು. ಮೇಷ್ಟರು ತಾನೆ ಮುಖವನ್ನು ನೋಡದೆ ಗೋಡೆಯನ್ನು ನೋಡುತ್ತ ಮಾತಾಡುವುದಕ್ಕಾಗುತ್ತದೆಯೆ? ಲಲಿತೆ ತನ್ನ ಮುಖದ ಚೆಲುವನ್ನು ನಾನು ಕದ್ದುಕೊಂಡು ಹೋಗುವೆನೆಂದು ಭಾವಿಸಿದಳೋ ಏನೋ, ನಾನು ಆ ಕಡೆ ನೋಡಿದಕ್ಷಣವೇ ಮುಖವನ್ನು ತಗ್ಗಿಸಿಬಿಡುವಳು. ಪುಸ್ತಕದ ಮರೆಯಲ್ಲಿ ಅವಳೇನು ನಗುತ್ತಿದ್ದಳೋ ಅಥವಾ ಹಿಂದಿನ ಮೇಷ್ಟರ ವಕ್ರಚಿತ್ರವನ್ನು ಬರೆದಂತೆ ನನ್ನ ಚಿತ್ರವನ್ನು ಬರೆಯುತ್ತಿದ್ದಳೋ ಎಂಬ ಸಂಶಯ ನನ್ನನ್ನು ಈಗಲೂ ಬಾಧಿಸುತ್ತಲೇ ಇದೆ. ಇಂಥ ಸಂದರ್ಭಗಳಲ್ಲಿ ಶಾಲೆಯ ಉಪಾಧ್ಯಾಯರು ಹೇಗೆ ನಡೆದು ಕೊಳ್ಳುತ್ತಾರೋ! ನನ್ನ ಉಪಾಧ್ಯಾಯರ ನಡೆವಳಿಕೆಯನ್ನು ನೆನಪಿಗೆ ತಂದುಕೊಂಡದ್ದರಿಂದ ಏನೂ ಪ್ರಯೋಜನವಿಲ್ಲ. ಹೆಣ್ಣುಹುಡುಗಿಯರ ಶಾಲೆಯ ಮೇಷ್ಟರು ತಮ್ಮ ಹೆಂಡತಿ ಕ್ಲಾಸಿನಲ್ಲಿ ಕುಳಿತಿದ್ದರೆ ಹೇಗೆ ಪಾಠ ಹೇಳುತ್ತಾರೋ! ಅಂಥ ಪ್ರಸಂಗ ಯಾರಿಗಾದರೂ ಒದಗಿದೆಯೋ ಇಲ್ಲವೋ ತಿಳಿಯದು. ಒಟ್ಟಿನಲ್ಲಿ ಮನಸ್ಸಿನ ಲವಲವಿಕೆ ಅಷ್ಟೇನೂ ಹೆಚ್ಚಾಗಿರಲಾರದೆಂದೂ, ಬುದ್ಧಿ ಚುರುಕಾಗಿ ಕೆಲಸಮಾಡಲಾರದೆಂದೂ ತೋರುತ್ತದೆ. ಮನೆಯಲ್ಲಿ ಹೆಂಡತಿಯ ಎದುರಿಗೆ ಕುಳಿತು ಪಾಠ ಹೇಳು ವುದಂತೂ ಮತ್ತೂ ಕಷ್ಟ.

ಅಷ್ಟೇ ಅಲ್ಲದೆ ಪಾಠ ಹೇಳಿಕೊಡುವುದು ಮುಗಿದಮೇಲೆ ಸಹ ನಾವು ಎಂದಿನಂತೆ ಇರುವುದು ಅಸಾಧ್ಯವಾಗುತ್ತಿತ್ತು. ಪುಸ್ತಕವನ್ನು ಮುಚ್ಚಿದ ಕೂಡಲೆ ಲಲಿತೆ ಯಾರೋ ಅಪರಿಚಿತರನ್ನು ಕಂಡು ಒಳಗೆ ಹೋಗುವ ವಳಂತೆ ಎದ್ದು ಹೊರಟುಹೋಗುತ್ತಿದ್ದಳು. ನನ್ನ ಪೂರ್ವಪರಿಚಿತ ಲಲಿತೆ

ಮನೆಯಲ್ಲಿ ಕಾಣುತ್ತಲೇ ಇರಲಿಲ್ಲ, ಅವಳನ್ನು ನಾನು ಸಲಿಗೆಯಾ.. ಮಾತಾಡಿಸುವುದೇ ಕಷ್ಟವಾಗುತ್ತಿತ್ತು. ಈ ಬಗೆಯ ಜೀವನ ಕೆಲವು ತಿಂಗಳು ನಡೆಯುವವೇಳೆಗೆ ಲಲಿತೆಗೆ ಬೇಸರವಾದದ್ದಲ್ಲದೆ ತನ್ನಲ್ಲಿ ನನಗೆ ಪ್ರೀತಿ ಕಡಿಮೆಯಾಯಿತೆಂಬ ಭಾವನೆ ಸಹ ಬಂದಂತೆ ತೋರುತ್ತದೆ. ಈ ಉಪಾಧ್ಯಾಯ–ಶಿಷ್ಯೆ ಸಂಬಂಧ ತೊಲಗಿಹೋಗಲೆಂಬ ಇಚ್ಛೆ ನಮ್ಮಿಬ್ಬರಿಗೂ ಏಕಕಾಲದಲ್ಲೇ ಬಂದಿರಬೇಕು. ಆದರೂ ಅದನ್ನು ಬಾಯಿಬಿಟ್ಟು ಹೇಳುವುದಕ್ಕೆ ಇಬ್ಬರೂ ಹಿಂಜರಿಯುತ್ತಿದ್ದೆವು. ನಾನೇನಾದರೂ ಮೊದಲು ಹೇಳಿದ್ದರೆ ಲಲಿತೆ ನನ್ನ ಪ್ರಾಣ ತೆಗೆದುಬಿಡುತ್ತಿದ್ದಳು.

ಈ ಮಧ್ಯೆ ನಮ್ಮ ಮಾವನವರು "ಲಲಿತೆ ನಮ್ಮ ಮನೆಯಲ್ಲಿ ಕೆಲವು ದಿನ ಇರಲಿ" ಎಂದು ಹೇಳಿ ಅವಳನ್ನು ಕರೆದುಕೊಂಡುಹೋದರು. ನನ್ನ ಮನಸ್ಸಿಗೆ ಸ್ವಲ್ಪ ಸಂತೋಷವಾಯಿತೆಂದೇ ಹೇಳಬೇಕು. ಒಂಟಿಯಾಗಿ ಜೀವಿಸುವುದೇನೋ ಕಷ್ಟವಾದರೂ ಆಗ ಇದ್ದ ಸ್ಥಿತಿಯಲ್ಲಿ ಲಲಿತೆ ಮನೆಯಲ್ಲಿ ಇದ್ದರೂ ಇಲ್ಲದಂತೆಯೇ ಆಗಿತ್ತು. ಲಲಿತೆಗೂ ಹಾಗೆಯೇ ತೋರಿರಬೇಕು. ಆದರೂ ಅವಳು ಹೊರಡುವಾಗ "ಪಾಠ ಹೇಳುವುದು ತಪ್ಪಿತು, ನಿಮಗೆ ಬಹಳ ಸಂತೋಷವೇನೋ" ಎಂದು ನನ್ನಮೇಲೆ ಮಾತು ಹಾಕದೆ ಬಿಡಲಿಲ್ಲ. ನಾನೂ ಅವಳಿಗೆ "ಹೇಳಿಕೊಟ್ಟದ್ದೆಲ್ಲಾ ಮರೆತುಕೋಡು ಬಾ. ನಿನ್ನ ಸೋಮಾರಿತನಕ್ಕೆ ಒಳ್ಳೆಯ ನೆಪ ಸಿಕ್ಕಿದ ಹಾಗಾಯಿತು" ಎಂದು ಹೇಳಿಕಳುಹಿಸಿದೆ.

ಲಲಿತೆ ಹೋದಮೇಲೆ ಎರಡು ಮೂರು ದಿನಗಳು ಹೇಗೋ ಕಳೆದು ಹೋದುವು. ನನ್ನ ಮೊದಲನೆಯ ಕಾಗದದಲ್ಲಿ ನಾನು ಇಂಗ್ಲಿಷ್ ಪಾಠದ ಮಾತೇ ಎತ್ತಿರಲಿಲ್ಲ. ಅದು ಆಗಲೇ ಮರೆತುಹೋಗುವುದರಲ್ಲಿತ್ತು. ನಾನು ಬಹಳ ಉತ್ಸಾಹದಿಂದ ಪ್ರೇಮಪತ್ರವನ್ನು ಬರೆದು ಎರಡು ದಿನ ಉತ್ತರವನ್ನು ನಿರೀಕ್ಷಿಸಿ ಅದು ಬಂದಮೇಲೆ ಒಡೆದು ನೋಡಿದರೆ, ಅದರಲ್ಲಿ ನಮ್ಮ ನಮ್ಮ ಮಾತುಗಳೇನೂ ಇರದೆ ಎಲ್ಲಾ ಇಂಗ್ಲಿಷ್ ಭಾಷೆಯ ವಿಷಯವೇ ಆಗಿತ್ತು. ಕೊನೆಯಲ್ಲಿ ತಾನು ಸಾಧಾರಣವಾಗಿ ಕಾಗದವನ್ನು ಕೊನೆಗಾಣಿಸುವ ರೀತಿಯನ್ನು ಬಿಟ್ಟು "ನಿಮ್ಮ ವಿಧೇಯಳಾದ ಶಿಷ್ಯೆ" ಎಂದು ಬರೆದುಕೊಂಡಿದ್ದಳು. ಅವಳು ಊರು ಬಿಟ್ಟುಹೋಗಿ ಆಗಲೇ

ನಾಲ್ಕೈದು ದಿನಗಳಾಗಿದ್ದುವು. ನನಗೆ ಆಗ ಇಂಗ್ಲಿಷ್ ಭಾಷಾಂತರವೂ ವಿಧೇಯಳಾದ ಶಿಷ್ಯೆಯೂ ಬೇಕಾಗಿರಲಿಲ್ಲ. ಇಂಗ್ಲಿಷ್ ಭಾಷೆ ಹಾಳಾಗ ಲೆಂದು ಕಾಗದವನ್ನು ಹರಿದು ಬಿಸುಟೆನು. ಆದರೂ ಕೋಪವನ್ನು ಹೇಗೋ ನುಂಗಿ ಜೀರ್ಣಿಸಿಕೊಂಡು ಅವಳು ಕೇಳಿದ ಪದಗಳ ಅರ್ಥ ವನ್ನೆಲ್ಲಾ ಬರೆದು ಕಳುಹಿಸಬೇಕಾಯಿತು. ಹಾಗೆ ಮಾಡದಿದ್ದರೆ "ನಿಮ್ಮಿಂದ ನಾನು ವಿದ್ಯೆ ಕಲಿಯುವುದು ತಪ್ಪಿತು" ಎಂದು ಸಾಯುವ ವರೆಗೂ ಕಾಡುತ್ತಾಳೆ. ಇದನ್ನೆಲ್ಲಾ ಯೋಚಿಸಿಕೊಂಡೇ ಅವಳು ಹಾಗೆ ಕಾಗದ ಬರೆದಿರಬೇಕು. ಈ ಬಗೆಯ ಟಪಾಲು ಬೋಧನೆ ಕೆಲವು ದಿನ ನಡೆಯಿತು. ಕೊನೆಗೆ ನನಗೆ ಬಹಳ ಅಸಹ್ಯವಾಗಿ ಒಂದು ಉಪಾಯ ವನ್ನು ಹುಡುಕಿದೆನು. ನಮ್ಮ ಮಾವನವರಿಗೆ ಒಂದು ಕಾಗದ ಬರೆದು ಅದರ ಜೊತೆಯಲ್ಲಿ ಲಲಿತೆಯ ಭಾಷಾಂತರ ಪಾಠವನ್ನಿಟ್ಟು "ಇದನ್ನು ಚಿ॥ ಸೌ॥ ಲಲಿತೆಗೆ ತಲಪಿಸುವುದು" ಎಂದು ಬರೆದು ಕಳುಹಿಸಿದೆ. ಅವರು ಅದನ್ನು ನೋಡಿದಮೇಲೆ ಲಲಿತೆಗ ಚೆನ್ನಾಗಿ ಬೈಗುಳಾಯಿತಂತೆ. "ನಾನು ಎದುರಿಗೆ ಇಲ್ಲವೆ, ಅರ್ಥ ಕೇಳಿದ್ದರೆ ಹೇಳುತ್ತಾ ಇರಲಿಲ್ಲವೆ! ಅವರಿಗೆ ತೊಂದರೆಕೊಟ್ಟು ಅಲ್ಲಿಂದ ಕಾಗದದಲ್ಲಿ ಬರೆದು ತರಿಸಿಕೊಳ್ಳ ಬೇಕೆ!" ಎಂದು ತುಂಬ ಆಕ್ಷೇಪಿಸಿದರಂತೆ. ಅದಾದಮೇಲೆ ಏಳೆಂಟು ದಿನ ಲಲಿತೆ ಕಾಗದವನ್ನೇ ಬರೆಯಲಿಲ್ಲ. ನಾನು ಮಾತ್ರ ಪಾಠಗಳನ್ನು ಬರೆದು ಕಳುಹಿಸಬೇಕೆಂದೂ ಸೋಮಾರಿಯಾಗಿರಕೂಡದೆಂದೂ ಎಚ್ಚರಿಸಿ ತಪ್ಪದೆ ಪ್ರತಿದಿನವೂ ಕಾಗದಗಳನ್ನು ಬರೆಯುತ್ತಿದ್ದೆ. ಒಂದೆರಡು ವಾರಗಳಾದ ನಂತರ ಒಂದು ಕಾಗದಕ್ಕೂ ಉತ್ತರ ಬರದೆ ಇದ್ದದ್ದರಿಂದ ಬಹಳ ಅಸಮಾಧಾನಪಟ್ಟುಕೊಂಡು ಒಂದು ಆಕ್ಷೇಪಣೆಯ ಪತ್ರವನ್ನು ಬರೆದ ಮೇಲೆ ಉತ್ತರ ಬಂತು—ನನ್ನ ವಿಧೇಯಳಾದ ಶಿಷ್ಯೆಯಿಂದಲ್ಲ, ನನ್ನ ಪ್ರಿಯೆ ಲಲಿತೆಯಿಂದ. ಕಾಗದದಲ್ಲಿ ಇಂಗ್ಲಿಷ್ ಪಾಠದ ಮಾತೇ ಎತ್ತಿರಲಿಲ್ಲ. ಕೊನೆಯಲ್ಲಿ ಮಾತ್ರ "ನಿಮ್ಮ ತಂತ್ರ ನನಗೆ ತಿಳಿಯದೆ ಇಲ್ಲ" ಎಂದು ಒಂದು ವಾಕ್ಯವನ್ನು ಸೇರಿಸಿದ್ದಳು. ಅವಳು ತಂದೆಯ ಮನೆಯಿಂದ ಬಂದಮೇಲೂ ನಾನಾಗಲಿ ಅವಳಾಗಲಿ ಇಂಗ್ಲಿಷ್ ಪಾಠದ ಮಾತೇ ಆಡಲಿಲ್ಲ. ಪಾಠ ತಪ್ಪಿದ್ದರಿಂದ ನಮ್ಮಿಬ್ಬರನ್ನೂ ಮುಸುಕಿದ್ದ ಮಂಜು

ಹರಿದು ಮತ್ತೆ ಒಬ್ಬರ ಮುಖವನ್ನೊಬ್ಬರು ನೋಡುವಹಾಗಾಯಿತು. ಕೆಲವು ದಿನಗಳಾದಮೇಲೆ ನಾನು ಮತ್ತೆ ಮೇಷ್ಟರೊಬ್ಬರನ್ನು ಗೊತ್ತು ಮಾಡಬೇಕೆಂದಾಗ ಲಲಿತೆ ಯಾವ ಆಕ್ಷೇಪಣೆಯನ್ನೂ ಮಾಡದೆ ಸುಮ್ಮನಿದ್ದಳು.

ಈಗ ಲಲಿತೆಯೂ ನಾನೂ ಒಟ್ಟಿಗೆ ರೋಮಿಯೋ ಜೂಲಿಯೆಟ್ ನಾಟಕವನ್ನೂ, ಷೆಲ್ಲಿಯ ಗೀತೆಗಳನ್ನೂ ಓದುತ್ತೇವೆ. ಆದರೆ ಅದು ನನ್ನ ಶಿಕ್ಷಣದ ಮಹಿಮೆಯಲ್ಲ.

# ಪ್ರಣಯಯಾತ್ರೆ

ನನಗೆ ಮದುವೆಯಾಗಿ ಎಂಟು ವರ್ಷವಾಗಿತ್ತು. ಒಂದು ವಿಧದಲ್ಲಿ ನೋಡಿದರೆ ಆ ಎಂಟು ವರ್ಷಗಳೂ ಸುಖಮಯವಾಗಿಯೇ ಕಳೆದುವೆಂದು ಹೇಳಬೇಕು. ನನ್ನ ಲಲಿತೆ ಬಲು ಒಳ್ಳೆಯ ಹುಡುಗಿ. ಯಾವಾಗಲೂ ಲವಲವಿಕೆಯಿಂದಿರುವ ಅವಳ ಮುಖದಲ್ಲಿ ಎಳಸು ಸ್ವಲ್ಪವೂ ಕುಂದದೆ ಸದಾ ಮುಗುಳುನಗೆ ಆಡುತ್ತಲೇ ಇರುವುದು. ಹುಬ್ಬು ಗಂಟಿಕ್ಕಿಕೊಂಡು ಹಣೆಯನ್ನು ಸುಕ್ಕುಮಾಡಿಕೊಂಡು ಸಿಡುಕಾಡದಿದ್ದರೆ ತಮ್ಮ ಗರತಿತನಕ್ಕೆ ಭಂಗಬರುವುದೆಂದು ಕೆಲವರು ಭಾವಿಸುವಂತೆ ತೋರುತ್ತದೆ. ಲಲಿತೆ ಅಂಥವಳಲ್ಲ, ಅವಳು ಸೌಖ್ಯಕ್ಕೆ ಶತ್ರುವಲ್ಲ. ಅವಳ ನಗುಮುಖದ ಕಾಂತಿಯಿಂದ ನನ್ನ ಮನೆ ಯಾವಾಗಲೂ ಬೆಳಕಾಗಿಯೇ ಇರುತ್ತಿತ್ತು. ಇತ್ತ ನನ್ನ ತಾಯಿಗೆ ನನ್ನಲ್ಲಿ ಎಣೆಯಿಲ್ಲದ ವಿಶ್ವಾಸ, ನನ್ನ ಸೌಖ್ಯಕ್ಕಾಗಿ ಹಗಲಿರುಳೆನ್ನದೆ ದೇಹದ ಅಸ್ವಸ್ಥತೆಯನ್ನು ಸಹ ಲೆಕ್ಕಿಸದೆ ಕಷ್ಟಪಡಲು ಸಿದ್ಧರಾಗಿರುವರು. ಮನೆಯಲ್ಲಿ ಐಶ್ವರ್ಯವಿಲ್ಲದಿದ್ದರೂ ಬಡತನವಿರಲಿಲ್ಲ. ಸೌಖ್ಯಕ್ಕೆ ಇನ್ನೇನು ಬೇಕು? ಆದರೂ ನನಗೆ ಸ್ವಲ್ಪ ಅತೃಪ್ತಿ. ಸಾಧಾರಣವಾಗಿ ಪ್ರತಿಯೊಬ್ಬ ಯುವಕನೂ ಅಪೇಕ್ಷಿಸುವ ಸ್ವಾತಂತ್ರ್ಯ ನನ್ನ ಜೀವನದಲ್ಲಿ ಸಾಕಾದಷ್ಟಿರಲಿಲ್ಲ. ನಮ್ಮ ತಾಯಿ ನನ್ನ ಸೌಖ್ಯವೇ ತಮ್ಮ ಸೌಖ್ಯವೆಂದು ತಿಳಿದಿದ್ದರೂ ತಮಗೆ ಸುಖವಾದದ್ದೆಲ್ಲ ನನಗೂ ಸುಖವಾಗಿರಬೇಕೆಂದು ನಂಬಿದ್ದರು. ಅವರ ಭಾಗಕ್ಕೆ ನಾನು ಇನ್ನೂ ತಿಳುವಳಿಕೆಯಿಲ್ಲದ ಹುಡುಗ. ಸರಿಯಾಗಿ ಆಹ್ನಿಕಮಾಡುವುದಿಲ್ಲವೆಂದು ನಾನು ಗೃಹಸ್ಥನಾಗಿ ಸಂಬಳ ತರುವ ಹಾಗಾದಮೇಲೂ ಅವರು ನನ್ನನ್ನು ಆಕ್ಷೇಪಿಸದೆ ಬಿಡುತ್ತಿರಲಿಲ್ಲ. ಹೊರಗಿನವರು ಯಾರಾದರೂ ಆಕ್ಷೇಪಿಸಿದ್ದರೆ, ಕಚೇರಿಯ ಕೆಲಸದಲ್ಲಿ ಅದಕ್ಕೆಲ್ಲಾ ಹೊತ್ತಿಲ್ಲವೆಂದೋ ಅದೆಲ್ಲಾ ಬರಿಯ ಆಡಂಬರವೆಂದೋ ನಿಶ್ಚಲವಾದ ದೈವಭಕ್ತಿಯೊಂದಿದ್ದರೆ ಸಾಕೆಂದೋ ಉಪನ್ಯಾಸಮಾಡಿ ಅವರ ಬಾಯಿ ಮುಚ್ಚಿಸಿ ನನ್ನ ಮನಸ್ಸಾಕ್ಷಿಯನ್ನೂ ಸಮಾಧಾನಪಡಿಸುತ್ತಿದ್ದೆ. ಆದರೆ ನಮ್ಮ ತಾಯಿಯ ಎದುರಿಗೆ ಹೀಗೆಲ್ಲಾ ಮಾತಾಡಿದರೆ ಅವರು ನಕ್ಕು

"ನಿನ್ನ ಎಡವಟ್ಟು ಮಾತು ಗೊತ್ತೇ ಇದೆ, ನಡಿಯೋ ಆಚೆಗೆ" ಎಂದು ಓಡಿಸಿಬಿಡುವರು. ಮನೆಯಿಂದ ಹೊರಗೆ ನನ್ನ ಮಾತಿಗೆ ಮನ್ನಣೆಯುಂಟು; ಆದರೆ ಮನೆಯವರಿಗೆ ನನ್ನ ಅಭಿಪ್ರಾಯಗಳು ವಿಚಿತ್ರವಾಗಿ ಕಾಣುತ್ತಿದ್ದುವು. ನಾನು ಹುಚ್ಚನೋ ಅಥವಾ ಬೆಪ್ಪನೋ ಎಂಬ ಸಂಶಯ ನಮ್ಮ ತಾಯಿಗೆ ಇನ್ನೂ ಬಗೆಹರಿದಿಲ್ಲವೆಂದೇ ತೋರುತ್ತದೆ. ಅವರು ನನ್ನ ಮಾತನ್ನು ಗಣನೆಗೇ ತಂದುಕೊಳ್ಳದೆ ಹಾಸ್ಯಮಾಡಿದರೆ ನಾನೂ ಅವರ ಜೊತೆಗೆ ನಗುತ್ತಿದ್ದೆನಾದರೂ ಒಂದೊಂದು ವೇಳೆ ಸ್ವಲ್ಪ ಅಸಮಾಧಾನವಾಗುತ್ತಿತ್ತು. ಸಾಲದ್ದಕ್ಕೆ ಆ ದುರುಳೆ ಲಲಿತೆ ಬಾಗಿಲಿನ ಹಿಂದೆ ನಿಂತು ಅತ್ತೆಯ ಮಾತನ್ನು ಕೇಳುತ್ತಾ ಹುಸಿನಗೆ ನಗುತ್ತಿರುತ್ತಾಳೆ; ಒಂದೊಂದುಸಲ "ಹಾಗಾಗ ಬೇಕು ನಿಮಗೆ" ಎನ್ನುವಂತೆ ನನ್ನ ಕಡೆಗೆ ಕಣ್ಣುಹಾರಿಸುವುದೂ ಉಂಟು. ಇದರಿಂದ ನನ್ನ ಸ್ವಾಭಿಮಾನಕ್ಕೆ ಸ್ವಲ್ಪ ಕುಂದು ಬಂದಂತಾಗುವುದು. ಷೇಕ್ಸ್‌ಪಿಯರ್, ಷೆಲ್ಲಿ ಮೊದಲಾದವರ ಕಾವ್ಯಗಳನ್ನು ವ್ಯಾಸಂಗಮಾಡಿ ಕ್ಯಾಂಟ್, ಹೆಗೆಲ್ ಮೊದಲಾದವರ ತತ್ವಗಳನ್ನು ವಿಮರ್ಶಿಸಿ ಸುಸಂಸ್ಕೃತ ವಾದ ನನ್ನ ಬುದ್ಧಿಶಕ್ತಿಯನ್ನು ಇಷ್ಟು ಹಗುರವಾಗಿ ಕಾಣುವುದೆ!

ಸಂಸಾರ ನಿರ್ವಹಣ ಕಾರ್ಯದಲ್ಲಿ ಲಲಿತೆಗೆ ನಾನು ಸರಿಯಾದ ಶಿಕ್ಷಣಕೊಡುವೆನೆಂಬ ನಂಬಿಕೆ ನಮ್ಮ ತಾಯಿಗೆ ಸ್ವಲ್ಪವೂ ಇರಲಿಲ್ಲ. ಲಲಿತೆ ಏನೂ ಅರಿಯದ ಹುಡುಗಿ. ಒಳ್ಳೆಯ ಗೃಹಿಣಿಯಾಗುವಂತೆ ಅವಳಿಗೆ ಬುದ್ಧಿ ಹೇಳಿ ಅನುಭವಶಾಲಿಯಾಗುವಂತೆ ಮಾಡಬೇಕೆಂದು ಅವರ ಆಸೆ—ಅತ್ತೆಯರೆಲ್ಲರಿಗೂ ಇರಬೇಕಾದ ಆಸೆ. ಆದರೆ ನನಗೆ ಲಲಿತೆ ಗೃಹಿಣಿಯಾಗಿರುವುದಕ್ಕಿಂತಲೂ ಹೆಚ್ಚಾಗಿ ನನ್ನ ನಲ್ಲೆಯಾಗಿರಬೇಕೆಂದು ಇಷ್ಟ—ಮನೆಯ ಕೆಲಸಗಳು ಹೇಗೋ ನಡೆಯುತ್ತವೆ. ಗೃಹಿಣಿಯೆಂದರೆ ಮನೆಯ ಕೆಲಸವನ್ನೆಲ್ಲಾ ಅಚ್ಚುಕಟ್ಟಾಗಿ ಮಾಡಿ, ಮಡಿಹುಡಿ ಆಚಾರಗಳಲ್ಲೆಲ್ಲಾ ಸರಿಯಾದ ವ್ಯವಸ್ಥೆಮಾಡಿ ಮನೆಯವರೆಲ್ಲರನ್ನೂ ಹದದಲ್ಲಿಟ್ಟುಕೊಂಡಿರುವ ಗಂಭೀರ ಸ್ವಭಾವದ ಹೆಂಗಸು. ಲಲಿತೆ ವಯಸ್ಸಿನಲ್ಲಾಗಲಿ ಸ್ವಭಾವದಲ್ಲಾಗಲಿ ಹಾಗಿರಲು ತಕ್ಕವಳಲ್ಲ. ಅವಳು ಅತ್ತೆ ಹೇಳಿದ ಕೆಲಸವನ್ನು ಮುಗಿಸಿಕೊಂಡು ನನ್ನ ಕೊಠಡಿಗೆ ಬರಬೇಕಾದರೆ ಹೊಸಲಿನಿಂದ ಚಿಮ್ಮಿ ಬರುವಳು; ನೆರಿ ನೆಲವನ್ನು ಸ್ವಲ್ಪ ಗುಡಿಸುತ್ತಲೇ ಇರುವುದು; ಹರಟೆಯ

ಮಲ್ಲಿಯೆಂದರೆ ಅಷ್ಟಿಷ್ಟಲ್ಲ. ಕೆಲವು ವೇಳೆ ನನ್ನ ಕಡೆ ನೋಡಿ ಕಾರಣ ವಿಲ್ಲದೆಯೇ ನಕ್ಕು, ನನ್ನ ಮುಖದಲ್ಲೇನಾದರೂ ಮಸಿಯಿದೆಯೇನೋ ಎಂಬ ಭ್ರಾಂತಿಯಿಂದ ನಾನು ಕನ್ನಡಿ ನೋಡಿಕೊಳ್ಳುವಂತೆ ಮಾಡಿದ್ದಾಳೆ. ಈಗಿನ ಸಣ್ಣ ಕಥೆಗಳನ್ನೋದಿದ್ದರಿಂದಲೋ ಏನೋ, ಹಿಂದಿನಿಂದ ಬೆಕ್ಕಿನ ಹಾಗೆ ಬಂದು ಕಣ್ಣು ಮುಚ್ಚುವುದನ್ನು ಬೇರೆ ಕಲಿತಿದ್ದಾಳೆ; ನನ್ನನ್ನು ಕೂರಿಸಿ ಬಳೆತೊಡಿಸಿ ಹಣೆಗೆ ಕುಂಕುಮ ಇಟ್ಟು ನೋಡಿದ್ದೂ ಉಂಟು. ಅವಳು ಪತಿಯನ್ನು ಮಂದಾಸನದಲ್ಲಿಟ್ಟು ಪೂಜಿಸುತ್ತಿರಲಿಲ್ಲ, ಅವನೊಡನೆ ಆಡುತ್ತಿದ್ದಳು; ಪತಿ ದೇವರಾಗಿರಬಹುದು, ಆದರೆ ಅವಳಿಗೆ ದೇವರಿಗಿಂತಲೂ ಹೆಚ್ಚಾಗಿ ಸಂಗಾತಿ. ಹಿಂದಿನ ಕಾಲದವರ ಗಾಂಭೀರ್ಯಕ್ಕೂ ಈ ಚೆಲ್ಲಾಟದ ಹುಡುಗಿಗೂ ಬಹು ದೂರ. ಇದರಿಂದ ಮನೆಯಲ್ಲಿ ನಮ್ಮ ತಾಯಿಗೂ ನಮ್ಮಿಬ್ಬರಿಗೂ ಇರಬೇಕಾದ ಹೊಂದುವಣೆ ಸ್ವಲ್ಪ ಕಡಿಮೆಯಾಗಿ ಎಷ್ಟೋ ಸಣ್ಣ ವಿಷಯಗಳಲ್ಲಿ ಮನಸ್ಸಿಗೆ ಕರೆಕರೆಯಾಗುತ್ತಿತ್ತು. ಲಲಿತೆ ತನ್ನ ಶುಭ್ರವಾದ ಹಣೆಯಲ್ಲಿ ಹುಬ್ಬಿನ ನಡುವೆಗಿಂತ ಸ್ವಲ್ಪ ಮೇಲೆ ಸಣ್ಣದಾಗಿ ಕುಂಕುಮದ ಬೊಟ್ಟನ್ನು ಇಟ್ಟು ಒಂದರೆ ಅದೆಷ್ಟು ಚೆಲುವೆಯಾಗಿ ಕಾಣುತ್ತಾಳೆ! ಆದರೆ ಆ ಬೊಟ್ಟನ್ನು ಸ್ವಲ್ಪ ದೊಡ್ಡದುಮಾಡಿದರೆ ಸಾಕು, ಅದನ್ನು ಹಣೆಯಮೇಲೆ ಸ್ವಲ್ಪ ಎತ್ತರದಲ್ಲಿಟ್ಟರೆ ಸಾಕು, ದುಂಡು ಕುಂಕುಮಕ್ಕೆ ಸ್ವಲ್ಪ ಬಾದಾಮಿಯ ಆಕಾರವನ್ನು ಕೊಟ್ಟರೆ ಸಾಕು, ಉಚಿತ ಪ್ರಮಾಣ ಕೆಟ್ಟುಹೋಗಿ ಕಲಾವಸ್ತುವಿನಲ್ಲಿರಬೇಕಾದ ಮಿತಿಯೂ ಹಿಡಿತವೂ ತಪ್ಪಿಹೋಗುತ್ತವೆ. ಆದರೆ ನಮ್ಮ ತಾಯಿಗೆ ಕುಂಕುಮವು ಚೆಲುವಿನ ಬೊಟ್ಟಲ್ಲ, ಪವಿತ್ರವಾದ ಸತೀತ್ವದ ಚಿಹ್ನೆ; ಅದು ದೊಡ್ಡದಾದಷ್ಟೂ ಪವಿತ್ರತೆಯೂ ಹೆಚ್ಚೆಂದೇ ಅವರ ನಂಬಿಕೆ. ಅವರ ಮನಸ್ಸು ನೋಯದಿರಲೆಂದು ಲಲಿತೆ ಅವರೆದುರಿಗಿದ್ದಾಗ ಸ್ವಲ್ಪ ದೊಡ್ಡದಾಗಿ ಅಡ್ಡ ಕುಂಕುಮವನ್ನೇ ಇಟ್ಟುಕೊಳ್ಳುವಳು. ಅಳ್ಳಕವಾಗಿ ಜಡೆ ಹೆಣೆದು ಒಂದೆರಡು ಸಂಪಗೆ ಅಥವಾ ಗುಲಾಬಿ ಹೂವನ್ನು ಮುಡಿದರೆ ಅವಳು ಬಹು ಸುಂದರವಾಗಿ ಕಾಣುತ್ತಾಳೆ. ಆದರೆ ನಮ್ಮ ತಾಯಿ ಅವಳಿಗೆ ಬಿಗಿಯಾಗಿ ಜಡೆ ಹೆಣೆದು ಅವಳು ತುಂಬ ಹೂವು ಮುಡಿದರೆ ಚೆನ್ನಾಗಿರುತ್ತದೆಂದು ಪ್ರೀತಿಯಿಂದ ನಾಲ್ಕು ಕುಚ್ಚು ಹೂವು ಮುಡಿಸಿಬಿಡುತ್ತಿದ್ದರು. ಗಂಡನ

ಮನಸ್ಸು ನೊಂದರೂ ನೋಯಲೆಂದು ಲಲಿತೆ ಅತ್ತೆಗೆ ವಿಹಿತವಾಗಿಯೇ ನಡೆಯುವಳು. ನನ್ನ ಮನಸ್ಸಿನ ನೋವನ್ನು ವಾಸಿಮಾಡುವ ಅಮೃತ ತನ್ನಲ್ಲಿದೆಯೆಂದು ಅವಳು ಬಲ್ಲಳು. ನಾನು ನಿತ್ಯವೂ ರಾತ್ರಿ ಕ್ಲಬ್ಬಿನಿಂದ ಮನೆಗೆ ಬರುವ ಹೊತ್ತಿಗೆ ನಮ್ಮ ತಾಯಿ ಬಿಸಿಯಾಗಿ ಅಡಿಗೆ ಮಾಡಿಟ್ಟಿರುತ್ತಾರೆ. "ಟೆನಿಸ್ ಆಡಿ ಹಸಿದುಬಂದಿದ್ದಾನೆ, ಬಿಸಿಬಿಸಿಯಾಗಿ ಊಟ ಮಾಡಲಿ" ಎಂದು ಅವರ ಯೋಚನೆ. ಆದರೆ ನನಗೆ ಆಗಲೇ ಊಟ ಬೇಕಿಲ್ಲ. ಮನೆಗೆ ಬಂದೊಡನೆ ಲಲಿತೆಯನ್ನು ಮುತ್ತಿಡಬೇಕು, ಅವಳೊಡನೆ ಸ್ವಲ್ಪ ಹರಟೆ ಬಡಿದು ಹುಚ್ಚುಹುಚ್ಚಾಗಿ ನಗಬೇಕು, ಇಲ್ಲವೆ ಅವಳ ಕೆನ್ನೆಗೆ ಕೆನ್ನೆಯನ್ನಿಟ್ಟುಕೊಂಡು ಮೌನವಾಗಿ ಕುಳಿತು ಶಾಂತಿಯನ್ನನುಭವಿಸಬೇಕು. ಆದರೆ ಲಲಿತೆ ನನ್ನ ಕೊಠಡಿಗೆ ಬಂದು ನಿಲ್ಲುವುದರೊಳಗೆ ನಮ್ಮ ತಾಯಿ "ಲಲಿತೆ, ರಾಮುವಿಗೆ ಕಾಲಿಗೆ ನೀರು ಕೊಟ್ಟು ಎಲೆ ಹಾಕೆ" ಎಂದು ಕೂಗುವರು. ಸ್ವಲ್ಪ ಅಸಮಾಧಾನ, ಸ್ವಲ್ಪ ಕುಚೇಷ್ಟೆ, ಸ್ವಲ್ಪ ಭರವಸೆ ಎಲ್ಲವೂ ಸವಿಯಾಗಿ ಬೆರೆದ ನಗೆಯನ್ನು ನಕ್ಕು ಲಲಿತೆ ಓಡಿಹೋಗುವಳು. ....ಸಂಜೆ ಟೆನಿಸ್ ಆಡುವುದು ತಪ್ಪಿದರೆ ತಪ್ಪಲೆಂದು ಕ್ಲಬ್ಬಿಗೆ ಹೋಗದೆ ಮನೆಗೆ ಬಂದು ಲಲಿತೆಯನ್ನು ತಿರುಗಾಟಕ್ಕೆ ಕರೆದುಕೊಂಡು ಹೋಗೋಣವೆಂದರೆ ನನ್ನ ಜೊತೆ ವಾಕಿಂಗು ಹೊರಡುವುದಕ್ಕೆ ಅವಳೇನು ಸಾಹೇಬಗಿತ್ತಿ ಕೆಟ್ಟುಹೋದಳೆ!....ಮೈಸೂರಿನಲ್ಲಿ ಬೆಳುದಿಂಗಳಿಗೆ ಬರಗಾಲ. ಇಲ್ಲಿಯ ಎಲೆಕ್ಟ್ರಿಕ್ ದೀಪಗಳ ಹಾವಳಿಯಲ್ಲಿ ಬೆಳುದಿಂಗಳನ್ನು ಹುಡುಕಿಕೊಂಡು ಚಾಮುಂಡಿಯ ಬೆಟ್ಟಕ್ಕೇ ಹೋಗಬೇಕು. ಅಲ್ಲಿ ಲಲಿತೆಯ ಜೊತೆ ಸುತ್ತಾಡಿ ಕಿವಿಯಲ್ಲಿ ಸವಿಮಾತುಗಳನ್ನುಸುರುವುದಕ್ಕಾದರೆ! ಅದೆಲ್ಲಿ ಸಾಧ್ಯ! ನಾವು ಬೆಟ್ಟಕ್ಕೆ ನಡೆದು ಹೋಗುವುದಕ್ಕಾಗುವುದಿಲ್ಲ. ಮೋಟಾರಿನಲ್ಲಿ ಹೋಗೋಣವೆಂದರೆ ನಾನು ಅಷ್ಟು ಐಶ್ವರ್ಯವಂತನಲ್ಲ. ಅಥವಾ ಬಾಡಿಗೆಗೆ ತಂದರೂ ಮನೆಯವರೆಲ್ಲರನ್ನೂ ಬಿಟ್ಟು ನಾವಿಬ್ಬರೇ ಹೋಗುವುದು ಹೇಗೆ?

ಇಂಥ ಸಣ್ಣ ಕುಂದು ಕೊರತೆಗಳು ಒಂದು ನೂರು ಇದ್ದುವು. ಮದುವೆಯಾದ ಹೊಸದರಲ್ಲಿ, ನವಪ್ರಣಯದ ಭರದಲ್ಲಿ ಈ ಕೊರತೆಗಳು ಅಷ್ಟು ದೊಡ್ಡವಾಗಿ ಕಾಣಲಿಲ್ಲ. ಆದರೆ ಸ್ವಲ್ಪ ದಿನ ಕಳೆದಮೇಲೆ ಜೀವನದಲ್ಲಿ

ಕೊಂಚ ಬೇಸರ ಹುಟ್ಟಿತು. ದಿನಬೆಳಗಾದರೆ ಒಂದೇ ತರದ ಕಾರ್ಯಕ್ರಮ: ಊಟಮಾಡಿ ಕಚೇರಿಗೆ ಹೋಗುವುದು, ಕ್ಲಬ್ಬಿಗೆ ಹೋಗಿ ಟೆನಿಸ್ ಆಡುವುದು, ಮನೆಗೆ ಬರುವುದು; ಲಲಿತೆ ಕಾಲಿಗೆ ನೀರು ಕೊಡುತ್ತಾಳೆ, ನಮ್ಮ ತಾಯಿ ಬಡಿಸುತ್ತಾರೆ, ಅನಂತರ ದಿನಾ ಆಡಿದ ಮಾತುಗಳನ್ನೇ ಮತ್ತೆ ಆಡಿ ಮುಗಿಸುತ್ತೇವೆ. ಜೀವನದಲ್ಲಿ ಸ್ವಾತಂತ್ರ್ಯವೂ ಇಲ್ಲ, ವೈವಿಧ್ಯವೂ ಇಲ್ಲ. ನನ್ನ ಜೀವನವೇ ಬೇರೆ, ಮನೆಯವರ ಜೀವನವೇ ಬೇರೆ....ಮದುವೆಯಾದ ಹೊಸದರಲ್ಲಿ ಪಶ್ಚಿಮದೇಶದವರು "ಹನಿಮೂನ್" ಹೋಗುವಂತೆ ನಾನೂ ಪ್ರಣಯಯಾತ್ರೆ ಹೋಗಬೇಕು ಎನ್ನಿಸಿತು. ನಾನು ಲಲಿತೆ ಇಬ್ಬರೇ ಎಲ್ಲಾದರೂ ಹೋಗಿ ಒಂದು ತಿಂಗಳು ಇದ್ದು ಬರಬೇಕು, ನಾವಿಬ್ಬರೇ—ಯಾವ ಮಾತಾಡಿದರೆ ಯಾರೇನು ತಿಳಿದುಕೊಳ್ಳುತ್ತಾರೋ ಎಂಬ ಭಯದ ಅಥವಾ ನಾಚಿಕೆಯ ಕಟ್ಟಿರಬಾರದು. ನಮಗೆ ಗುರುತಾದವರು ಯಾರೂ ಇಲ್ಲದಿರುವ ಯಾವುದಾದರೂ ಹಳ್ಳಿಗಾಡು ಸ್ಥಳಕ್ಕೆ ಹೋಗಿ ಸಂಸಾರಮಾಡಿಕೊಂಡಿದ್ದರೆ ಪಟ್ಟಣದ ನಾಗರಿಕತೆಯ ಕಟ್ಟುಗಳನ್ನೂ ಹಳೆಯ ಸಂಪ್ರದಾಯದ ಕಟ್ಟುಗಳನ್ನೂ ಕಿತ್ತೊಗೆದು ಸ್ವತಂತ್ರವಾಗಿರಬಹುದು, ಮನೆಯ ಕೆಲಸಗಳೆಲ್ಲವೂ ನಮ್ಮ ತಲೆಯಮೇಲೇ ಬೀಳುತ್ತವೆ, ನಿಜ; ಅಂಗಡಿಗೆ ಹೋಗಿ ಸಾಮಾನು ತಂದುಹಾಕುವುದು ಮುಂತಾದ ಕೆಲಸವನ್ನೆಲ್ಲಾ ನಾನೇ ಮಾಡಬೇಕಾಗುತ್ತದೆ. ಆದರೇನು, ಮನಸ್ಸಿಗೆ ಸ್ವಾತಂತ್ರ್ಯವೊಂದಿದ್ದರೆ, ಎಲ್ಲಾ ಕೆಲಸಗಳಲ್ಲಿಯೂ ಲಲಿತೆಯ ಜೊತೆ ಇದ್ದರೆ, ಯಾವುದೂ ಕಷ್ಟವಾಗಿ ತೋರುವುದಿಲ್ಲ. ಒಂದು ನಿಮಿಷವೂ ಒಬ್ಬರನ್ನೊಬ್ಬರು ಅಗಲದೆ ಅಡಿಗೆ, ಊಟ, ವಾಕಿಂಗ್—ಎಲ್ಲವನ್ನೂ ಜೊತೆಯಲ್ಲೇ ಮಾಡಬಹುದು. ಇದೆಲ್ಲವನ್ನೂ ಮನಸ್ಸಿನಲ್ಲಿ ತಿರುವಿಹಾಕಿ ಯಾತ್ರೆ ಹೊರಡುವುದೇ ಸಿದ್ಧವೆಂದು ನಿಶ್ಚಯಿಸಿದೆನು.

ಎಲ್ಲಿಗೆ ಹೋಗುವುದು ಎನ್ನುವುದೇ ಮುಂದಿನ ಸಮಸ್ಯೆ. ಚಾಮುಂಡಿಯ ಬೆಟ್ಟದ ಬಂಗಲೆಯಲ್ಲಿ ಇರಬಹುದು. ಆದರೆ ಅದು ಊರಿಗೆ ಬಹಳ ಹತ್ತಿರ. ಮೈಸೂರನ್ನು ಬಿಟ್ಟುಹೋದ ಹಾಗೇ ಇರುವುದಿಲ್ಲ; ಅಲ್ಲದೆ ಯಾವ ಸಾಮಾನು ಬೇಕಾದರೂ ಬೆಟ್ಟವನ್ನಿಳಿದು ಬರಬೇಕು.... ತಿರುಮಕೂಡಲು ನರಸೀಪುರಕ್ಕೆ ಹೋಗಬಹುದು. ಅಲ್ಲಿಯ ಬಂಗಲೆ

ನದೀತೀರದಲ್ಲಿ ಎತ್ತರವಾದ ಸ್ಥಳದಲ್ಲಿದೆ; ತೀರದ ಮರಳುದಿಬ್ಬಗಳು ವಿಸ್ತಾರವಾಗಿ ಬಹು ರಮ್ಯವಾಗಿವೆ. ಆದರೆ ಬಂಗಲೆ ರಸ್ತೆಗೆ ಬಹಳ ಹತ್ತಿರ. ಧೂಳಿನಲ್ಲಿ ಸ್ನಾನಮಾಡಿ ಬಸ್ಸಿನ ಸಂಗೀತವನ್ನು ಕೇಳುವುದಕ್ಕೆ ಅಷ್ಟು ದೂರ ಹೋಗಬೇಕೆ? ಈ ಮೋಟಾರುಗಳ ಕೂಗು ಕೇಳದೆ ಇರುವ ಯಾವುದಾದರೂ ಗಲಭೆಯಿಲ್ಲದ ಸ್ಥಳಕ್ಕೆ ಹೋಗಬೇಕು....ಶಿವಗೆರೆಗೆ ಹೋಗಬಹುದು. ಆ ಊರಿಗೆ ಒಂದು ಫರ್ಲಾಂಗು ದೂರದಲ್ಲಿರುವ ನದಿಯ ದಡದಲ್ಲಿ ಒಂದು ಮನೆಯಿದೆ. ಅದನ್ನು ಬಾಡಿಗೆಗೆ ತೆಗೆದುಕೊಂಡು ಒಬ್ಬರ ತಂಟೆಯಿಲ್ಲದೆ ಪಟ್ಟಣದ ನೂರೆಂಟು ಹವ್ಯಾಸಗಳಿಲ್ಲದೆ ಶಾಂತರೀತಿಯಲ್ಲಿ ಜೀವನಮಾಡಬಹುದು. ಹತ್ತಿರದಲ್ಲೇ ಇರುವ ಅಣೆಕಟ್ಟಿನಿಂದ ನೀರು ಧುಮುಕುವ ಸ್ಥಳದಲ್ಲಿ ಸ್ನಾನಕ್ಕೆ ಬಹಳ ಹಿತವಾಗಿರುತ್ತದೆ. ನದೀ ತೀರದಲ್ಲೇ ಸುತ್ತಾಡುತ್ತಾ ಸಂಜೆಯ ಸೊಬಗನ್ನು ಸವಿಯಬಹುದು. ಬೆಳುದಿಂಗಳಿನ ರಾತ್ರಿಯಲ್ಲಿ ನದಿಯ ಸಣ್ಣ ನಡುಗಡ್ಡೆಗಳಲ್ಲಿ ಕುಳಿತು ಸಂಗೀತದಲ್ಲೋ ಸಂಭಾಷಣೆಯಲ್ಲೋ ಇದೆಲ್ಲಕ್ಕಿಂತಲೂ ಹಿತವಾದ ಮೌನ ದಲ್ಲೋ ಕಾಲ ಕಳೆಯಬಹುದು. ನದಿಯ ಮಂಜುಳ ಗಾನವೇ ನಮಗೆ ಜೋಗುಳವಾಗಿ ನಿದ್ರೆ ತರುತ್ತದೆ.... ಶಿವಗೆರೆಗೇ ಹೋಗಬೇಕೆಂದು ನಿಶ್ಚಯಿಸಿದೆನು. ಲಲಿತೆಗೂ ಎಲ್ಲಿಗಾದರೂ ಹೋಗಬೇಕೆಂದು ನನ್ನ ಹಾಗೇ ಇಚ್ಛೆಯಿದ್ದರೂ ಶಿವಗೆರೆಯನ್ನು ಕಂಡರೆ ಆಗದು. ಆದ್ದರಿಂದ ಅವಳು ನನ್ನ ಉತ್ಸಾಹದ ಮೇಲೆ ತಣ್ಣೀರೆರಚುತ್ತಲೇ ಇದ್ದಳು. ನನ್ನ ಮೇಲೆ ಎಂದೂ ಇಲ್ಲದ ಅಪವಾದಗಳು ಬಂದುವು. ನನ್ನಂಥವನಿಗೆ ಆ ಸ್ಥಳ ದಲ್ಲಿ ಜೀವನಮಾಡುವುದು ಅಸಾಧ್ಯ....ನಾನು ಸೋಮಾರಿ; ಅಂಗಡಿಗೆ ಹೋಗಿ ಮೂರು ಕಾಸಿನ ವ್ಯಾಪಾರಮಾಡುವುದಕ್ಕೂ ಬೇಜಾರು; ಅವಳೊಬ್ಬಳನ್ನೇ ಬಿಟ್ಟು ಪುಸ್ತಕದಲ್ಲಿ ಮುಳುಗಿಹೋಗುತ್ತೇನೆ; ನಗಾರಿ ಬಾರಿಸಿದರೂ ಪುಸ್ತಕದಿಂದ ತಲೆಯೆತ್ತದೆ, ಬಾವಿಯೊಳಗಿಂದ ಮಾತಾಡು ವವರಂತೆ "ಆ" ಎನ್ನುತ್ತೇನೆ—ಇತ್ಯಾದಿ, ಇತ್ಯಾದಿ. ಇದೆಲ್ಲವೂ ಹೋಗಲೆಂದರೂ ನಾನು ಅಡಿಗೆ ಮನೆಗೆ ನುಗ್ಗಿ ಮಡಿ ಮೈಲಿಗೆಯನ್ನೆಲ್ಲಾ ಬೆರಸಿ ತಿಂಡಿಯನ್ನು ಹುಡುಕಿ, ಏನೂ ಸಿಕ್ಕದಿದ್ದರೆ ಕಾಯಿಬೆಲ್ಲವನ್ನೆಲ್ಲಾ ಪೂರೈಸಿಬಿಡುತ್ತೇನಂತೆ. ನಾನು ಅಡಿಗೆ ಮನೆಯಲ್ಲಿ ಇದುವರೆಗೂ ಒಂದು

ದಿನವೂ ಸಿಕ್ಕಿಬಿದ್ದಿಲ್ಲ; ಆದರೂ ಈ ದೂರು ಮಾತ್ರ ತಪ್ಪಲಿಲ್ಲ. "ಹೀಗೆಲ್ಲಾ ಮಾಡುತ್ತೀರಿ, ಆಮೇಲೆ ನನಗೂ ನಿಮಗೂ ಜಗಳ ಬಂದರೆ ನಾನು ಜವಾಬ್ದಾರಳಲ್ಲ. ಅಲ್ಲಿಗೆ ಹೋದರೆ ಒಂದುಪಕ್ಷ ನೀವು ಸುಖವಾಗಿದ್ದರೂ ನನಗೆ ಸುಖವಿಲ್ಲ. ನಿಮ್ಮ ಬೆಳುದಿಂಗಳು ಎಷ್ಟು ಚೆನ್ನಾಗಿದ್ದರೂ ನನ್ನ ಪಾಲಿಗೆ ಬರುವುದು ಅಡಿಗೆ ಒಲೆಯ ಬೆಳಕೇ" ಎಂದು ಹೇಳಿ, ಲಲಿತೆ ತನ್ನ ಫಿರ್ಯಾದನ್ನು ಮುಗಿಸಿದಳು. ನನಗೆ ಕೇಳಿ ತಲೆ ಚಿಟ್ಟುಹಿಡಿದು ಹೋಯಿತು. ಹಾಳು ಮನಸ್ಸು ಅಡಿಗೆಯ ಒಲೆ, ಕಾಯಿಬೆಲ್ಲ ಇವು ಗಳನ್ನು ಬಿಟ್ಟು ಮೇಲಕ್ಕೆ ಏರಲೇ ಬಾರದೆ! ಇದೇ ನಮ್ಮ ಹುಡುಗಿಯರಿಗೆ ವಿದ್ಯಾಭ್ಯಾಸವಿಲ್ಲದ್ದರ ಫಲ. ಕವಿಯ ಮನೋಧರ್ಮವೂ, ಭಾವದಲ್ಲಿ ಲೀನವಾಗಿ ಈ ಸ್ಥೂಲ ಪ್ರಪಂಚವನ್ನು ಮರೆಯುವ ಶಕ್ತಿಯೂ ಸ್ವಲ್ಪ ವಾದರೂ ಇರಬಾರದೆ! ಹಾಗೇನಾದರೂ ಹೇಳಿದರೆ "ಒಬ್ಬ ಅಡಿಗೆ ಯವಳನ್ನು ಗೊತ್ತುಮಾಡಿ, ನೀವು ಹೇಳಿದ ಹಾಗೆಯೇ ಕುಣಿಯುತ್ತೇನೆ" ಎಂದುಬಿಡುತ್ತಾಳೆ. ಅವಳ ಆಕ್ಷೇಪಣೆಗಳನ್ನೆಲ್ಲಾ ಉತ್ತರಿಸಿ ಶಿವಗೆರೆಗೇ ಹೋಗಬೇಕೆಂದು ನಿರ್ಧರಿಸಿದೆ. ಆದರ ಆ ದಿನವೇ ನನ್ನ ತಮ್ಮ ಒಂದು ಪ್ರತಿಬಂಧಕವನ್ನು ತಂದಿಟ್ಟನು. ನಾನು ಶಿವಗೆರೆಯಲ್ಲಿ ತೆಗೆದುಕೊಳ್ಳ ಬೇಕೆಂದಿದ್ದ ಮನೆಯಲ್ಲಿ ದೆವ್ವವಿತ್ತಂತೆ. ಹಗಲು ಹೊತ್ತೇ ಅದು ನೀರು ಜೋಲುವ ಬಟ್ಟೆಗಳನ್ನು ಧರಿಸಿ ಹೊಳೆಯಿಂದ ಎದ್ದು ಮನೆಯೊಳಕ್ಕೆ ಹೋದದ್ದನ್ನು ಎಷ್ಟೋ ಜನರು ನೋಡಿದ್ದರಂತೆ. ಇದನ್ನು ಕೇಳಿ ನನಗೆ ಬಹಳ ಅಸಮಾಧಾನವೂ ಆಶಾಭಂಗವೂ ಆಯಿತು. ಆ ದೆವ್ವದಲ್ಲಿ ನನಗೇನೋ ನಂಬಿಕೆಯಿಲ್ಲ. ಲಲಿತೆಯೂ ಬಹಳ ಧೈರ್ಯಸ್ಥಳಂತೆ "ನನಗೇನೂ ಹೆದರಿಕೆಯಿಲ್ಲ, ನನ್ನಿಂದ ನಿಂತುಹೋಯಿತು ಅಂತ ಆಮೇಲೆ ಹಂಗಿಸೀರಿ, ಜೋಕೆ" ಎಂದು ಎಚ್ಚರಿಕೆ ಕೊಟ್ಟು ನಮ್ಮ ತಾಯಿ ಇದ್ದ ಕಡೆಗೆ ಹೋದಳು. ಐದು ನಿಮಿಷವಾದಮೇಲೆ ಅವರು ಬಂದು "ಇದೇನೋ ನಿನ್ನ ಹುಚ್ಚು, ಆ ಮನೆಯಲ್ಲಿ ಹಗಲು ಹೊತ್ತೇ ದೆವ್ವ ಕುಣಿಯುತ್ತಂತೆ, ಅಲ್ಲಿಗೆ ಅವಳನ್ನು ಕರೆದುಕೊಂಡುಹೋಗಿ ಬಲಿಕೊಡುತ್ತೀಯಾ! ಸಾಕು ಬಿಡು. ಅತಿರೇಕ" ಎಂದು ರೇಗಿದರು. ಲಲಿತೆಯ ಸುಳಿವೇ ಇಲ್ಲ. ನಾನು ಬಾಯಿಮುಚ್ಚಿಕೊಂಡು ಕೊಠಡಿಗೆ ಹೋದರೆ ಲಲಿತೆ ಅಲ್ಲಿ

ಕುಳಿತಿದ್ದವಳು ಮೃದುಧ್ವನಿಯಿಂದ "ಶಿವಗೆರೆಗೆ ಏನೇನು ಸಾಮಾನು ಕಟ್ಟಿಸಲಿ" ಎಂದು ಕೇಳಿದಳು. ಆ ಪ್ರಶ್ನೆಗೆ ತಿರಸ್ಕಾರವೇ ಸರಿಯಾದ ಉತ್ತರವೆಂದುಕೊಂಡು ನಾನು ಸುಮ್ಮನಿದ್ದೆನು. ಅಂತೂ ಶಿವಗೆರೆಗೆ ಹೋಗುವ ಏರ್ಪಾಡು ಬಿದ್ದುಹೋಯಿತು.

ಇನ್ನು ಉಳಿದದ್ದು ಹೊನ್ನೂರು. ಅದು ಅನಾರೋಗ್ಯದ ಸ್ಥಳ ವಾದರೂ ಊರನ್ನು ಬಿಟ್ಟು ಒಂದು ಮೈಲಿ ದೂರದಲ್ಲಿರುವ ರೈಲ್ವೇ ಸ್ಟೇಷನ್ನಿನ ಬಳಿಯೇ ಇದ್ದರೆ ಹವ ಬಹಳ ಚೆನ್ನಾಗಿರುತ್ತದೆ. ಅಲ್ಲಿ ಎತ್ತರ ವಾದ ಬೋರೆಯ ಮೇಲೆ ಸುಮಾರು ಅರ್ಧ ಫರ್ಲಾಂಗಿನ ಅಂತರದಲ್ಲಿ ಮೂರು–ನಾಲ್ಕು ಮನೆಗಳು ಮಾತ್ರ ಇವೆ. ಊರಿನವರೆಲ್ಲರೂ ನಮಗೆ ಗುರುತಾದವರು. ನಮ್ಮ ತಾಯಿ ನಾನು ಅಲ್ಲಿಗೇ ಹೋಗಬೇಕೆಂದು ಹಟಹಿಡಿದು ಒಂದು ಮನೆಯನ್ನೂ ಗೊತ್ತುಮಾಡಿಟ್ಟರು. ಮನೆ ಅಷ್ಟೇನೂ ಅಚ್ಚುಕಟ್ಟಿಲ್ಲವಾದರೂ ತಕ್ಕಮಟ್ಟಿಗೆ ಅನುಕೂಲವಾಗಿತ್ತು. ಅಲ್ಲಿದ್ದದ್ದು ಒಂದು ಅಡಿಗೆ ಮನೆ, ಒಂದು ನಡುಮನೆ ಇಷ್ಟೆ. ಇನ್ನೊಂದು ಕೊಠಡಿಯನ್ನು ನಾನು ಅಲ್ಲಿಗೆ ಹೋಗುವುದರೊಳಗೆ ಮಾಡಿಸಿಕೊಡು ವುದಾಗಿ ಮಾಲೀಕರಾದ ಗುಂಡಪ್ಪನವರು ಹೇಳಿದರು.

ನನ್ನ ರಜ ಮಂಜೂರಾಗಿ ಬಂದೊಡನೆ ಹೂರಡುವ ಏರ್ಪಾಡು ಮಾಡಿದೆವು. ಏನೇನು ಸಾಮಾನು ತೆಗೆದುಕೊಂಡು ಹೋಗಬೇಕೆಂದು ಯೋಚನೆಮಾಡಿ ನಮ್ಮ ತಾಯಿ ಅದನ್ನೆಲ್ಲಾ ತೆಗೆದಿಟ್ಟರು, ಲಲಿತೆ ಎಲ್ಲವನ್ನೂ ಅಣಿಯಾಗಿ ಗಂಟು ಕಟ್ಟಿದಳು. ನಾನು "ಅದನ್ನು ಮರೆಯ ಬೇಡ, ಇದನ್ನು ಮರೆಯಬೇಡ" ಎಂದು ಕೂಗಾಡಿದೆ. ಹೀಗೆ ಮೂವರೂ ಕಷ್ಟಪಟ್ಟು ಎಲ್ಲವನ್ನೂ ಸಿದ್ಧಪಡಿಸಿದೆವು. ಹುಷಾರಾಗಿರಬೇಕೆಂದು ಎಚ್ಚರಿಕೆ ಕೊಟ್ಟು ನಮ್ಮ ತಾಯಿ ನಮ್ಮನ್ನು ಕಳುಹಿಸಿಕೊಟ್ಟರು. ನಾವು ಹೊನ್ನೂರಿನಲ್ಲಿ ಇಳಿಯುವ ಹೊತ್ತಿಗೆ ಮಧ್ಯಾಹ್ನ ಒಂದು ಘಂಟೆ. ಬಿಸಿಲು ಬಲು ಜೋರಾಗಿತ್ತು. ನಮಗೆ ಗುರುತಾದವರೊಬ್ಬರು ಸಾಮಾನು ಗಳನ್ನು ತೆಗೆದುಕೊಂಡುಹೋಗುವುದಕ್ಕೆ ಸ್ಟೇಷನ್ನಿಗೆ ಆಳುಗಳನ್ನು ಕರೆದುಕೊಂಡು ಬಂದಿದ್ದರು. "ಸ್ಟೇಷನ್ನಿನಿಂದ ಮನೆಗೆ ಸಾಮಾನು ಸಾಗಿಸುವುದೇ ಫಜೀತಿಯಾಗುತ್ತೆ, ನೋಡಿ ಬೇಕಾದರೆ" ಎಂದು ಹೆದರಿಸಿದ್ದ

ಲಲಿತೆಯ ಮಾತು ಸುಳ್ಳಾಯಿತು. ನಮ್ಮ ಮನೆಯನ್ನು ಸೇರಿ ಮೈಸೂರಿನಿಂದಲೇ ತಂದಿದ್ದ ಕಾಫಿಯನ್ನು ಕುಡಿದು ಕುಳಿತೆವು. ಮನೆ ಇನ್ನೂ ವಾಸಕ್ಕೆ ಸಂಪೂರ್ಣವಾಗಿ ಅನುಕೂಲವಾಗಿರಲಿಲ್ಲ. ಅಡಿಗೆ ಮನೆಯಲ್ಲಿ ಒಲೆಯೇ ಇರಲಿಲ್ಲ. ನಾನು ಬರುವುದರೊಳಗೆ ಸಿದ್ಧವಾಗಬೇಕಾಗಿದ್ದ ಇನ್ನೊಂದು ಕೊಠಡಿಯೂ ಇರಲಿಲ್ಲ,—ಒಂದು ಗೋಡೆ ಮಾತ್ರ ಏಳುತ್ತಿತ್ತು. ಆದರೇನು? ನಾವು ಅಲ್ಲಿಗೆ ಬಂದದ್ದು ಹಳ್ಳಿಯ ಸರಳ ಜೀವನಕ್ಕಾಗಿ. ಒಲೆಯನ್ನು ಕಟ್ಟಿಸುವವರೆಗೆ ಮೂರು ಕಲ್ಲುಗಳನ್ನಿಟ್ಟುಕೊಂಡರಾಯಿತು. "ಕೊಠಡಿಯನ್ನು ಜಾಗ್ರತೆ ಮಾಡಿಸಿಕೊಡುತ್ತೇನೆ, ಗೋಡೆಯನ್ನು ಮುಗಿಸಿ ನಯಗಾರೆಮಾಡಿ ನೆಲ ಸರಿಮಾಡಿಸುವುದು—ಅಷ್ಟೇ ಉಳಿದಿರುವುದು. ಅದುವರೆಗೆ ಮಲಗುವುದಕ್ಕೆ ನಡುಮನೆಯೇ ವಿಶಾಲವಾಗಿ ಬಿಡುಬೀಸಾಗಿದೆ" ಎಂದು ಗುಂಡಪ್ಪನವರು ಹೇಳಿದರು. ಹೊಸದಾಗಿ ಸ್ವಾತಂತ್ರ್ಯದ ಪ್ರಪಂಚಕ್ಕೆ ಬಂದು ಸೇರಿದ್ದ ನನಗೆ ಆಗ ಇದೊಂದೂ ಅನನುಕೂಲವಾಗಿ ಕಾಣಲಿಲ್ಲ. ಆ ದಿನ ಸಾಯಂಕಾಲದವರೆಗೂ ಬಹು ಸುಖವಾಗಿ ಕಳೆಯಿತು. ಅಲ್ಲಿ ಸುತ್ತಲೂ ಬಯಲಾಗಿ ಗಾಳಿ ಚೆನ್ನಾಗಿ ಬೀಸುತ್ತಿದ್ದುದರಿಂದ ಬಿಸಿಲಿನ ತಾಪ ಹೆಚ್ಚಾಗಿ ತೋರಲಿಲ್ಲ. ಸಂಜೆ ನಾವಿಬ್ಬರೂ ಹೊಲಗಳ ಮೇಲೆ ಸ್ವಲ್ಪ ಸುತ್ತಾಡಿ ಮನೆಗೆ ಬಂದೆವು; ಜೀವನವು ಬಹು ಸುಖಮಯವಾಗಿ ಕಂಡಿತು.

ಇನ್ನು ರಾತ್ರಿಯ ಅಡಿಗೆಯ ಕೆಲಸ. ಮನೆಯ ಸುತ್ತ ಒಣಗಿ ನಿಂತಿದ್ದ ಹಂಗರು ಕಡ್ಡಿಯೇ ಆ ದಿನದ ಮಟ್ಟಿಗೆ ಸೌದೆಯಾಯಿತು. ಹಂಗರು ಕಡ್ಡಿಯನ್ನು ತಂದು ಲಲಿತೆಯ ಮುಂದೆ ಸುರಿದು "ನೋಡಿದೆಯಾ, ಸೌದೆಗೆ ಏನುಮಾಡುತ್ತೀರಿ, ಸೌದೆ ಒಡೆಯುವುದಕ್ಕೆ ಆಳೆಲ್ಲಿ ಸಿಕ್ಕುತ್ತಾನೆ ಅಂದೆಯಲ್ಲ! ನಿಮಗೆಲ್ಲ ಆ ಹಾಳು ಪಟ್ಟಣದ ಜೀವನ ಅಭ್ಯಾಸವಾಗಿ ಕೈಗೊಬ್ಬರು ಕಾಲಿಗೊಬ್ಬರು ಆಳುಗಳಿಲ್ಲದಿದ್ದರೆ ಬದುಕುವುದೇ ಅಸಾಧ್ಯವಾಗಿ ಕಾಣುತ್ತದೆ" ಎಂದು ಪ್ರಾರಂಭಿಸಿದೆ. ಲಲಿತೆಗೆ ಆ ಘಳಿಗೆಯಲ್ಲಿ ಕೊಂಕು ಮಾತೇನೂ ತೋರಲಿಲ್ಲವೇನೋ ಅಥವಾ "ಮುಂದಿದೆ ನಿಮಗೆ ಹಬ್ಬ" ಎಂದುಕೊಂಡು ಸುಮ್ಮನಾದಳೋ—ನನ್ನ ಮಾತಿಗೆ ಉತ್ತರ ಕೊಡದೆ "ಸ್ವಲ್ಪ ನೀರುಳ್ಳಿ ಬಿಡಿಸಿ" ಎಂದಳು. ನಾನು ಸ್ವಲ್ಪ ಹಿಂದು

ಮುಂದು ನೋಡಿ ಕುಳಿತುಕೊಂಡೆ. ನನ್ನ ಕಲ್ಪನೆಯಲ್ಲಿ ಲಲಿತೆಗೆ ಸಹಾಯಮಾಡುವುದೆಂದರೆ ಅಡಿಗೆಯ ಮನೆಯಲ್ಲಿಯೇ ಕುಳಿತು ಅವಳೊಡನೆ ಮಾತಾಡಿ, ಹಾಸ್ಯಮಾಡಿ ಅವಳಿಗೆ ಬೇಜಾರಾಗದಂತೆ ನೋಡಿ ಕೊಳ್ಳುವುದು—ಇಷ್ಟು ಮಾತ್ರ. ನೀರುಳ್ಳಿ ಬಿಡಿಸುವಂಥ ಸಣ್ಣ ಕೆಲಸ ಗಳನ್ನು ಅವಳೇ ಮಾಡಿಕೊಳ್ಳಬಾರದೆ? ನೀರುಳ್ಳಿ ಬಿಡಿಸುವುದಕ್ಕೆ ಜಟ್ಟಿಗಳ ಬಲವೇನೂ ಆವಶ್ಯಕವಿಲ್ಲ. ಆದರೆ ಅದು ಸುಲಭ ಕೆಲಸವಲ್ಲ. ಮೇಲಿನ ಸಿಪ್ಪೆಯನ್ನು ಬಿಡಿಸುವವರ ಕೈಗೆ ಸಿಕ್ಕದಂತೆ ಗೋಂದುಹಾಕಿ ಅಂಟಿಸಿ ಬಿಟ್ಟಿರುತ್ತಾರೆ. ನಿಮ್ಮ ಉಗುರು ಎಷ್ಟೇ ಹರಿತವಾಗಿರಲಿ ಆ ಸಿಪ್ಪೆಯ ತುದಿ ನಿಮ್ಮ ಕೈಗೆ ಸಿಕ್ಕುವುದು ಪ್ರಯಾಸ ಅಥವಾ ಸಿಕ್ಕಿದರೂ ಅಲ್ಲಿಗೇ ಕಿತ್ತುಹೋಗುತ್ತದೆ. ಅಕಸ್ಮಾತ್ ನಿಮ್ಮ ಕಣ್ಣಿಗೇನಾದರೂ ಕೈಸೋಕಿದರೆ ಸಾಕು, ಕಣ್ಣು ಉರಿಹತ್ತಿ ನೀರು ಸುರಿಯಲು ಪ್ರಾರಂಭ. ನಾನು ಕಣ್ಣುಬಿಡಲಾರದೆ ತಾಪತ್ರಯಪಡುತ್ತಿದ್ದದ್ದನ್ನು ನೋಡಿದಮೇಲಾದರೂ ಒಲೆಯ ಮುಂದೆ ಸುಮ್ಮನೆ ಕುಳಿತಿದ್ದ ಲಲಿತೆ ನನ್ನ ಸಹಾಯಕ್ಕೆ ಬರ ಬೇಡವೆ! ಸಂಸಾರವೆಂದರೆ ಒಬ್ಬರು ಕೆಲಸಮಾಡುವುದು, ಇನ್ನೊಬ್ಬರು ತಮಾಷೆ ನೋಡುತ್ತಿರುವುದು ಎಂದು ಅವಳು ಭಾವಿಸಿದಂತೆ ಕಾಣುತ್ತದೆ. ನನಗೆ ಸಹಾಯಮಾಡದೆ ಸುಮ್ಮನಿದ್ದು ಸುಲಿದು ಮುಗಿಸಿದಮೇಲೆ ಒಂದೊಂದಾಗಿ ಅವುಗಳನ್ನು ರತ್ನಪರೀಕ್ಷೆಮಾಡುವವಳಂತೆ ತಿರುಗಿಸಿ ತಿರುಗಿಸಿ ನೋಡಿ "ಸಿಪ್ಪೆ ಹಾಗೇ ಇದೆ, ಆಮೇಲೆ ಹುಳಿ ಕೆಟ್ಟುಹೋಯಿತು ಅಂತ ಆಕ್ಷೇಪಣೆ ಮಾಡೀರಿ" ಎಂದು ಒಂದುಸಲ ನನ್ನ ಕಡೆ ನೋಡಿ ಬೇರೆ ಕಡೆ ಮುಖವನ್ನು ತಿರುಗಿಸಿಕೊಂಡುಬಿಟ್ಟಳು. ನೀರುಳ್ಳಿ ಬಿಡಿಸು ವುದೂ ಸರಳ ಜೀವನದ ಅಂಗವೆಂದು ನಾನು ತಿಳಿದಿರಲಿಲ್ಲ.

ಊಟವಾಯಿತು. ಪಾತ್ರೆಗಳನ್ನು ತೊಳೆಯುವುದಕ್ಕೆ ಇನ್ನೂ ಯಾರನ್ನೂ ಗೊತ್ತುಮಾಡಿರಲಿಲ್ಲವಾದ್ದರಿಂದ ಆ ರಾತ್ರಿಯ ಮಟ್ಟಿಗೆ ಲಲಿತೆಯೇ ತೊಳೆಯಬೇಕಾಯಿತು. ಧೈರ್ಯಸ್ಥೆ, ನಾನು ಬಾಗಿಲಲ್ಲೇ ನಿಂತುಕೊಳ್ಳಬೇಕೆಂದು ಹಟಹಿಡಿದು ತೊಳೆದು ಮುಗಿಸಿದಳು. ನಡು ಮನೆಯಲ್ಲೇ ಮಲಗಿದೆವು. ಸುಮಾರು ಹನ್ನೆರಡು ಘಂಟೆಯ ಹೊತ್ತಿಗೆ ಭಯಂಕರವಾದ ಬಿರುಗಾಳಿಯೂ ಮಳೆಯೂ ಪ್ರಾರಂಭವಾದುವು.

ಮನೆಯ ಗೋಡೆಗಳೆಲ್ಲಾ ಗಾಳಿಯ ರಭಸಕ್ಕೆ ಅದುರುವಂತೆ ತೋರಿತು. ದೀಪಹಚ್ಚಿ ನೋಡಿದರೆ ಮನೆಯಲ್ಲಿ ಎಲ್ಲಾ ಕಡೆಯೂ ಸೋರುತ್ತಿತ್ತು. ನಾಲ್ಕು ಮೂಲೆಗಳಿಂದಲೂ ಸಣ್ಣ ಪ್ರವಾಹಗಳು ಹೊರಟು ನಮ್ಮನ್ನೇ ಹುಡುಕಿಕೊಂಡು ಬರುತ್ತಿದ್ದುವು. ಬೇಗ ಎದ್ದು ಹಾಸಿಗೆಯನ್ನು ಸುತ್ತಿದೆವು. ಆದರೆ ತೆಗೆದುಕೊಂಡುಹೋಗುವುದು ಎಲ್ಲಿಗೆ? ಎಲ್ಲಾ ಕಡೆಯಲ್ಲೂ ಸೋರುತ್ತಿತ್ತು. ಕೊನೆಗೆ ಒಂದು ಮೂಲೆಯಲ್ಲಿದ್ದ ಬೆಂಚಿನ ಮೇಲೆ ಹಾಸಿಗೆಯನ್ನು ಅಡಕಿ ಅದರಮೇಲೆ ಚಾಪೆಯನ್ನು ಹೊದಿಸಿ ನಾವೂ ಅಲ್ಲೇ ಒರಗಿಕೊಂಡು ಕುಳಿತೆವು. ಗಾಳಿಯೂ ಮಳೆಯೂ ಒಂದು ಘಂಟೆಯ ಕಾಲ ಬಿಡುವಿಲ್ಲದೆ ಹೊಡೆದುವು. ಮನೆಯ ಹೆಂಚುಗಳು ಹಾರಿಹೋದುವು. ಬೇರೆ ಮನೆಗಳ ಹೆಂಚು ನಮ್ಮ ಮನೆಯ ಮೇಲೆ ಬಿದ್ದರೂ ಅವುಗಳಿಂದ ಪ್ರಯೋಜನವೇನೂ ಆಗಲಿಲ್ಲ. ನಮ್ಮ ಲಾಂದ್ರಕ್ಕೆ ಏಟು ಬಿದ್ದು ಅದು ಆರಿಹೋಯಿತು. ಲಲಿತೆ ನಡುಗುತ್ತ ಕುಳಿತಳು. ಬಿರುಗಾಳಿಯ ಗರ್ಜನೆಯೊಡನೆ ಸ್ಪರ್ಧೆಹೂಡಿ ಗಂಟಲು ಒಡೆಯುವವರೆಗೂ ನಾನು ಕಿರಿಚಿದಮೇಲೆ ಗುಂಡಪ್ಪನವರು ಒಂದು ದೀಪವನ್ನು ಹಿಡಿದುಕೊಂಡು ಮಂಡಿಯುದ್ದ ನೀರಿನಲ್ಲಿ ಹಾದುಬಂದರು. ಬಂದು, "ನೀವು ಬಂದ ಘಳಿಗೆ ಒಳ್ಳೆಯದು ಸ್ವಾಮಿ, ಊರಿನಲ್ಲಿ ಎರಡು ತಿಂಗಳಿಂದ ಮಳೆಯ ಹನಿ ಕೂಡ ಇಲ್ಲದೆ ಪೈರುಪಚ್ಚೆಯೆಲ್ಲಾ ಗೆಜ್ಜಲು ಹಿಡಿದುಹೋಗುತ್ತಿತ್ತು. ನೀವು ಬರುತ್ತಾ ಜೊತೆಯಲ್ಲೇ ಮಳೆಯನ್ನು ತಂದಿರಿ" ಎಂದು ನಮಗೆ ಶಾಬಾಸುಗಿರಿಯನ್ನು ಕೊಟ್ಟರು. ನಾನು ಅವರಿಗೆ ಉತ್ತರ ಕೊಡುವ ಸ್ಥಿತಿಯಲ್ಲಿರಲಿಲ್ಲ. ಗುಂಡಪ್ಪನವರ ಮನೆಯಲ್ಲೇ ಒಂದು ಕೊಠಡಿಯನ್ನು ಬಿಡಿಸಿಕೊಂಡು ಅಲ್ಲಿ ಮಲಗಿದೆವು. ಆಗಲೂ ನಿದ್ರೆಗೆ ಅವಕಾಶವಿಲ್ಲದಂತೆ ಲಕ್ಷೋಪಲಕ್ಷ ಕಪ್ಪೆಗಳು ಒಟಗುಟ್ಟುವುದಕ್ಕೆ ಪ್ರಾರಂಭಿಸಿದುವು. ಸುತ್ತಿನ ಬಯಲಿನಲ್ಲಿದ್ದ ಸಜೀವ ಪ್ರಾಣಿಗಳೆಲ್ಲವೂ ವಿಕಾರವಾಗಿ ಕೂಗುವುದರಲ್ಲಿ ಸ್ಪರ್ಧೆಮಾಡುತ್ತಿದ್ದುವೋ ಅಥವಾ ಕಪ್ಪೆಗಳಲ್ಲಿಯೇ ಸಾವಿರ ವಿಧವಾದ ಗಂಟಲುಗಳುಳ್ಳ ಜಾತಿಗಳಿವೆಯೋ ಕಾಣೆ—ಅಂತೂ ಒಂದು ಕೂಗು ಮತ್ತೊಂದರಂತೆ ಇರಲಿಲ್ಲ. ಎಲ್ಲವೂ ಸೇರಿ ಹೃದಯಭೇದಕವಾದ ಭಯಂಕರ ಅಪಮೇಳವನ್ನು ಮಾಡಿದುವು. ಆ ರಾತ್ರಿಯನ್ನು ಹೇಗೆ

ಕಳೆದೆವೋ ಕಳೆದು, ಬೆಳಗಾದ ಮೇಲೆ ಇಬ್ಬರೂ ಇನ್ನೂ ಜೀವಂತರಾಗಿಯೇ ಇದ್ದುದ್ದಕ್ಕೆ ಒಬ್ಬರನ್ನೊಬ್ಬರು ಅಭಿನಂದಿಸಿದೆವು.

ಹಿಂದಿನ ರಾತ್ರಿ ನಾನು ಸೀರುಳ್ಳಿ ಸುಲಿಯುವುದಕ್ಕೆ ತೊಂದರೆ ಪಡುತ್ತಿದ್ದದ್ದನ್ನು ನೋಡಿ ಲಲಿತೆ ನಕ್ಕದ್ದು ಜ್ಞಾಪಕಬಂದು "ಕೆಲಸಕ್ಕೆ ನಿಂತರೆ ನಾನು ಯಾರಿಗೂ ಕಡಿಮೆಯಲ್ಲ, ಒಲೆಯ ಮುಂದೆ ಕುಳಿತಿರುವುದೇನು ಬ್ರಹ್ಮವಿದ್ಯೆಯೇ" ಎಂದುಕೊಂಡು ಆ ದಿನ ಬೆಳಗ್ಗೆ ನಾನೇ ಕಾಫಿ ಮಾಡಲು ಹೊರಟೆ. ಲಲಿತೆ ಸುಮ್ಮನೆ ನೋಡುತ್ತ ನಿಂತಳು. ಒಂದು ಬೆರಣಿಯನ್ನು ತಂದು ಅದಕ್ಕೆ ಸ್ವಲ್ಪ ಸೀಮೆಯೆಣ್ಣೆ ಸುರಿದು ಬೆಂಕಿ ಹತ್ತಿಸಿದೆ. ಸೀಮೆಯೆಣ್ಣೆ ಕೈಯ ಮೇಲೆಲ್ಲಾ ಸುರಿದು ವಾಸನೆಯಾದ್ದರಿಂದ ಬಚ್ಚಲ ಮನೆಗೆ ಹೋಗಿ ತೊಳೆದುಕೊಂಡು ಬಂದೆ. ಅಷ್ಟು ಹೊತ್ತಿಗೆ ಬೆರಣಿಯು ಚೂರೆಲ್ಲ ಉರಿದುಹೋಗಿತ್ತು. ಮತ್ತೆ ಸೀಮೆಯೆಣ್ಣೆಯನ್ನು ಸುರಿದು ಹತ್ತಿಸಿ ಹಂಗರು ಕಡ್ಡಿಯನ್ನಿಟ್ಟೆ. ಆದರೆ ಅದು ಹಿಂದಿನ ದಿನ ಮಳೆಯಲ್ಲಿ ನೆನೆದಿದ್ದುದ್ದರಿಂದ ಎಷ್ಟು ಊದಿದರೂ ಹತ್ತದೆ ಮನೆಯೆಲ್ಲಾ ಹೊಗೆ ಸುತ್ತಿಕೊಂಡು ಕಣ್ಣು ತೆಗೆಯುವುದೇ ಅಸಾಧ್ಯವಾಯಿತು. ಸೌದೆಯನ್ನು ಸರಮಾಡುವ ಪ್ರಯತ್ನದಲ್ಲಿ ನೀರಿಟ್ಟಿದ್ದ ಪಾತ್ರೆ ಉರುಳಿಕೊಂಡಿತು. ಇದನ್ನೆಲ್ಲಾ ಸ್ವಸ್ಥಚಿತ್ತಳಾಗಿ ನೋಡುತ್ತಿದ್ದ ಲಲಿತೆ ಆಗ "ಬಿಡಿ, ನಾನು ಮಾಡುತ್ತೇನೆ" ಎಂದು ಮುಂದೆ ಬಂದಳು. ಆದರೆ ನಾನು ಹಟಮಾರಿ; ಹೊಗೆಗೆ ಹೆದರಿ ಹಿಡಿದ ಕೆಲಸವನ್ನು ಮಾಡದೆ ಬಿಡುವ ಚೇತನವಲ್ಲ. ಮತ್ತೆ ಹೇಗೋ ಒಲೆ ಹತ್ತಿಸಿ ನೀರು ಕಾಯಿಸಿದೆ, ಕಾಫಿ ಪುಡಿಯನ್ನೂ ಸಕ್ಕರೆಯನ್ನೂ ಹಾಕುವ ಪ್ರಮಾಣದ ವಿಷಯವೊಂದು ಹೊರತು ಮತ್ತೆ ಯಾವುದಕ್ಕೂ ಲಲಿತೆಯ ಸಹಾಯವನ್ನೇ ಕೋರಲಿಲ್ಲ. ಹಾಲು ಕಾಯಿಸುವಾಗ ಅರ್ಧ ಹಾಲು ಉಕ್ಕಿಹೋದರೂ ಕಾಫಿಗೆ ಸಾಕಾಗುವಷ್ಟು ಉಳಿದಿತ್ತು. ಕಾಫಿ ಸಿದ್ಧವಾದ ಮೇಲೆ ಲಲಿತೆ ಅದನ್ನು ರುಚಿ ನೋಡಿ ಸೊಟ್ಟಮುಖವನ್ನು ಮಾಡಿ "ಅಬ್ಬಾ, ಬರೀ ಹೊಗೆವಾಸನೆ" ಎಂದಳು. ತಾನು ಮಾಡಿದ ಕಾಫಿಯಾಗಿದ್ದರೆ ಮಾತೇ ಆಡುತ್ತಿರಲಿಲ್ಲ. ನಾನು ರುಚಿ ನೋಡಿದ್ದರಲ್ಲಿ ಅದೇನೂ ಹೊಗೆವಾಸನೆಯಾಗಿ ಕಾಣಲಿಲ್ಲ. ಅದಲ್ಲದೆ ಆ ಹೊಗೆಯ ಅವಾಂತರದಲ್ಲಿ ಯಾರು ಮಾಡಿದ್ದರೂ ವಾಸನೆಯಾಗಿಯೇ ಆಗುತ್ತಿತ್ತು.

ಕಾಫಿ ಮಾಡುವ ಅನುಭವ ಅಷ್ಟು ಸಮರ್ಪಕವಾಗಲಿಲ್ಲವಾದ್ದರಿಂದ ನಾನು ಅಡಿಗೆಗೆ ಸಹಾಯಮಾಡಲು ಹೋಗಲಿಲ್ಲ. ಲಲಿತೆ ಕೊಬ್ಬರಿಯನ್ನು ತುರಿಯುವ ಸಮಯದಲ್ಲಿ ಒಳಗೆ ಹೋದೆನಾದರೂ ಅವಳು ಕೊಬ್ಬರಿಯನ್ನು ದೂರ ತೆಗೆದಿಟ್ಟು "ನಿಮ್ಮ ಸಹಾಯ ಏನೂ ಬೇಕಾಗಿಲ್ಲ" ಎಂದು ಹೇಳಿದ್ದರಿಂದ ನನ್ನ ಪಾಡಿಗೆ ನಾನು ಒಂದು ಪುಸ್ತಕವನ್ನು ಹಿಡಿದು ಕುಳಿತೆ.

ಸಂಜೆ ಐದು ಘಂಟೆಯ ಹೊತ್ತಿಗೆ ವಾಕಿಂಗು ಹೊರಡಲು ಸಿದ್ಧವಾದೆವು. ಇನ್ನೇನು ಹೊರಡಬೇಕು ಎನ್ನುವುದರಲ್ಲಿ ಹೊನ್ನೂರಿನ ಪುರೋಹಿತರು ಬಂದು ಕೂಗಿದರು. ಬಹಳ ಒಳ್ಳೆಯವರೆಂದು ನಾನು ಅವರಲ್ಲಿ ಮರ್ಯಾದೆಯಿಟ್ಟುಕೊಂಡಿದ್ದದ್ದರಿಂದ ಅವರನ್ನು ಅಸಡ್ಡೆಮಾಡಿ ಕಳುಹಿಸುವುದಕ್ಕಾಗಲಿಲ್ಲ. ನಾನು ಹೊನ್ನೂರಿಗೆ ಬಂದದ್ದು ಅವರಿಗೆ ಬಹಳ ಸಂತೋಷವನ್ನುಂಟುಮಾಡಿತ್ತು. "ಈಗಿನ ಕಾಲದ ಹುಡುಗರು ಹಳ್ಳಿ ಅಂದರೆ ಅಸಡ್ಡೆಯಾಗಿ ಕಾಣುತ್ತಾರೆ, ನಿನ್ನಹಾಗಿರುವವರು ಬಹಳ ಅಪರೂಪ ಕಣಯ್ಯ" ಎನ್ನುತ್ತಾ ನನ್ನ ಹೆಗಲಮೇಲೆ ಕೈಹಾಕಿ ನನ್ನನ್ನು ಒಳಗೆಳೆದುಕೊಂಡುಹೋಗಿ "ಊರಿನಲ್ಲಿ ರಾಮೋತ್ಸವ ಮಾಡಿಸುತ್ತಾ ಇದೇವೆ, ಪ್ರತಿದಿನವೂ ರಾಮಾಯಣ ಪಾರಾಯಣ, ಮಂಗಳಾರತಿ, ಕೊನೆಗೆ ಹನುಮಂತೋತ್ಸವ ಎಲ್ಲಾ ನಡೆಯಬೇಕು. ನೀನು ಮೈಸೂರಿನಲ್ಲಿದ್ದರೂ ನಮಗೆ ಸೇರಿದವನೇ ಕಣಯ್ಯ, ನಮ್ಮ ರಾಮನ ಸೇವೆ ಮಾಡುವುದಕ್ಕೆ ನಿನಗೂ ಹಕ್ಕಿದೆ" ಎಂದರು. ನಾನು ಆ ಹಕ್ಕಿಗೆ ರಾಜೀನಾಮೆ ಕೊಡಲು ಸಿದ್ಧನಾಗಿದ್ದರೂ ಲಲಿತೆ ಸಿದ್ಧಳಾಗಿರಲಿಲ್ಲ ಪುರೋಹಿತರಿಗೆ ಏನಾದರೂ ಕುಂಟು ನೆವ ಹೇಳಿ ಕಳುಹಿಸೋಣವೆಂದು ನಾನು ಯೋಚಿಸುತ್ತಿರುವಷ್ಟರಲ್ಲಿ ಒಳಗೆ ಒಂದು ರೂಪಾಯಿ ನೆಲಕ್ಕೆ ಬಿದ್ದ ಸದ್ದು ಕೇಳಿಸಿತು. ಸರಿ, ಒಂದು ರೂಪಾಯಿ ತಂದು ಅವರ ಕೈಯಲ್ಲಿ ಹಾಕಿ ಅವರೊಡನೆ ಸ್ವಲ್ಪ ಹೊತ್ತು ಮಾತಾಡಿ ಕಳುಹಿಸಿದ್ದಾಯಿತು. ಅಷ್ಟು ಹೊತ್ತಿಗೆ ಐದೂಮುಕ್ಕಾಲು ಘಂಟೆಯಾಯಿತು. ಮನೆಗೆ ಬೀಗ ಹಾಕಿ ಮತ್ತೆ ಹೊರಟೆವು. ಮನೆಯಿಂದ ಹತ್ತು ಮಾರು ಹೋಗುವುದರೊಳಗೆ ನನ್ನ ಪೂರ್ವ ಸ್ನೇಹಿತ ಕಂಠಿ "ಏನಯ್ಯಾ, ನಿನ್ನೆ ಬಂದೆಯಂತೆ" ಎಂದುಕೊಂಡು ಬಂದ. ನನಗೆ ಪುರೋಹಿತರು ಮೊದಲೇ ಬೇಜಾರು ಹಿಡಿಸಿಬಿಟ್ಟಿದ್ದರು.

ಅವನಿಗೆ ಕೋಪಬಂದರೂ ಒರಲೆಂದು "ಹೌದಯ್ಯಾ, ನಾಳೆ ನೋಡುತ್ತೇನೆ" ಎನ್ನುತ್ತಾ ಹೊರಟುಹೋದೆ.

ನಾನಿದ್ದ ಮನೆಗೆ ಸಮೀಪದಲ್ಲೇ ಸಣ್ಣದೊಂದು ತೊರೆ ಹರಿಯುತ್ತದೆ. ಆದರಲ್ಲಿರುವ ನೀರು ಸ್ವಲ್ಪವಾದರೂ ಅದರ ಶುಭ್ರವಾದ ಮರಳಿನ ಪಾತ್ರ ವಿಸ್ತಾರವಾಗಿದೆ. ಆ ತೊರೆ ಅಲ್ಲಿಗೆ ಒಂದೂವರೆ ಮೈಲಿ ದೂರದಲ್ಲಿರುವ ಬೋರೆಯಿಂದ ಹೊರಟು ಹೊಲಗಳ ನಡುವೆ ಸುತ್ತಿಕೊಂಡು ಒಂದು ಕರೆಗೆ ಹೋಗಿಬೀಳುತ್ತದೆ. ಅದರ ದಡದಲ್ಲಿ ಉದ್ದಕ್ಕೂ ನೂರಾರು ಕಾಡುಮೊಲ್ಲೆಯ ಗಿಡಗಳು ಬೆಳೆದು ಲಕ್ಷಗಟ್ಟಲೆ ಹೂವು ಬಿಟ್ಟಿದ್ದುವು. ತೊರೆಯ ಪಾತ್ರದಲ್ಲಿ ಎಷ್ಟು ದೂರ ನಡೆದುಹೋದರೂ ಸುತ್ತಿನ ದೃಶ್ಯ ಬಹು ರಮ್ಯವಾಗಿರುತ್ತದೆ. ಲಲಿತೆಯು ನಾಚಿಕೆಯೊಂದಿಲ್ಲದಿದ್ದರೆ ನಮ್ಮ ವಾಕಿಂಗ್ ಸುಖಮಯ ವಾಗಿಯೇ ಇರುತ್ತಿತ್ತು. ನಾವು ಎರಡುಸಲ ಮನೆಯನ್ನು ಬಿಟ್ಟು ಹೊರಟಾಗಲೂ ಯಾರೋ ಬಂದುಬಿಟ್ಟದ್ದರಿಂದ ಅವಳ ನಾಚಿಕೆ ಎಂದಿಗಿಂತ ಹೆಚ್ಚಾಗಿತ್ತು. ನಾನೊಬ್ಬನೇ ಇರುವಾಗ ಚಿತ್ರಹಿಂಸೆಮಾಡಿ ಪ್ರಾಣ ತೆಗೆಯುವ ಹುಡುಗಿ, ಹೊರಗೆ ಬಂದರೆ ಅವಳಿಗೆ ಎಲ್ಲೂ ಇಲ್ಲದ ಗಾಂಭೀರ್ಯ ಬರುತ್ತದೆ. ಸಾಧಾರಣವಾಗಿ ಯಾರೂ ತಿರುಗಾಡದಿರುವ ಆ ಸ್ಥಳದಲ್ಲಿ ಸಹ ನನ್ನ ಜೊತೆಯಲ್ಲಿ ನಿರಾತಂಕವಾಗಿ ಬರಲಾರಳು. ಆ ದಿನ ನಮ್ಮ ದುರದೃಷ್ಟಕ್ಕೆ ಸರಿಯಾಗಿ ಐದು ನಿಮಿಷಕ್ಕೊಂದುಸಲ ಯಾರಾದರೂ ಸಿಕ್ಕುತ್ತಲೇ ಇದ್ದರು. ಅಲ್ಲಿಯ ರೈತರು ಶುಭ್ರವಸ್ತ್ರಗಳನ್ನುಟ್ಟ ಗಂಡಸರನ್ನೂ ಧರ್ಮಾವರದ ಸೀರೆಯನ್ನುಟ್ಟ ಹೆಂಗಸರನ್ನೂ ನೋಡಿಯೇ ಇಲ್ಲವೇನೊ, ನಾವು ಹೋಗುತ್ತಿದ್ದರೆ ನಮ್ಮ ಕಡೆ ಆಶ್ಚರ್ಯದಿಂದ ನೋಡಿ ಲಲಿತೆಯ ಮುಖ ಕೆಂಪೇರುವಂತೆ ಮಾಡುವರು. ಸ್ವಲ್ಪ ದೂರ ಹೋದಮೇಲೆ ಅಲ್ಲಿ ಯಾರೂ ಬರಲಾರರೆಂದು ನಾವು ಕೈಹಿಡಿದುಕೊಂಡು ಹೋಗುತ್ತಿದ್ದರೆ ಒಂದು ಮೂಲೆದಿರುವಿನಿಂದ ನಮಗೆ ಗುರುತಾದ ಬ್ರಾಹ್ಮಣರೇ ಒಬ್ಬರು ಹಠಾತ್ತಾಗಿ ಬಂದುಬಿಟ್ಟರು. ಲಲಿತೆ ಭೂಮಿಗಿಳಿದು ಹೋದಳು.

ಮೂರನೆಯ ದಿನ ನನ್ನ ಬಟ್ಟೆಗಳನ್ನು ನಾನೇ ಒಗೆದುಕೊಳ್ಳಬೇಕಾದ ಸನ್ನಿವೇಶ ಒದಗಿತು. ನಾವು ಈ ಕೆಲಸಕ್ಕೆಲ್ಲ ಎರಡನೆಯ ದಿನವೇ ಒಬ್ಬ ಆಳನ್ನು ಗೊತ್ತುಮಾಡಿಕೊಂಡಿದ್ದೆವು. ಆದರೆ ಅವನಿಗೆ ನಾಲುನಾರಿಕೆಯೋ

ಅಥವಾ ಕೆಲಸವೇ ಬಾರದೋ, ಅವನು ಒಗೆದ ಬಟ್ಟೆಗಳು ಸಂನ್ಯಾಸಿಗಳ ಉಡುಪಿನ ಬಣ್ಣವನ್ನು ತಾಳುತ್ತಿದ್ದುವು. ಆದ್ದರಿಂದ ನಾನೂ ಲಲಿತೆಯೂ ಸೇರಿ ಬಟ್ಟೆ ಒಗೆಯಬೇಕೆಂದು ನಿಶ್ಚಯಿಸಿ ನಾನು ನೀರು ಸೇದಿಕೊಡುವುದು, ಲಲಿತೆ ಸಾಬೂನು ಹಾಕಿ ಇಡುವುದು ಎಂದು ಕೆಲಸವನ್ನು ಹಂಚಿಕೊಂಡೆವು. ಆ ಹಾಳು ಬಾವಿಯ ರಾಟೆ ನನ್ನ ಕೈಗೆ ನಿಲುಕುವುದಕ್ಕಿಂತ ಸ್ವಲ್ಪ ದೂರ ವಾಗಿತ್ತು. ಬಿಂದಿಗೆಯನ್ನು ಸರಸರನೆ ಮೇಲಕ್ಕೆಳೆದು ಲಲಿತೆ ಆಶ್ಚರ್ಯ ಪಡುವಂತೆ ಅದನ್ನು ಒಂದೇ ಕೈಯಲ್ಲಿ ಎತ್ತಿ ನೀರು ಸುರಿಯಬೇಕೆಂದು ನಾನು ಕೈಚಾಚಿದರೆ ಆ ಬಿಂದಿಗೆ ನಿಲುಕಲೇ ಒಲ್ಲದು. ಆಗ ಸ್ವಲ್ಪ ಬಿಸಿಲು ಹೊತ್ತಾದರೂ ಅದಕ್ಕೆ ಉಯ್ಯಾಲೆ ಆಡಬೇಕೆಂಬ ಅಪೇಕ್ಷೆ ಬಂದಂತೆ ತೋರಿತು. ಅದು ತೂಗಾಡುತ್ತಾ ನನ್ನ ಕಡೆಗೇ ಬರುವುದು, ಆದರೆ ನಾನು ಕೈಚಾಚುವುದರೊಳಗೆ ಸ್ವಲ್ಪ ಬಲಗಡೆಗೆ ತಿರುಗಿ ನಿಧಾನವಾಗಿ ಹಿಂದಕ್ಕೆ ಹೊರಟುಹೋಗುವುದು. ಮತ್ತೊಂದು ವೇಳೆ ಅದು ತೂಗಾಡು ವುದು ನಿಂತಿತೆಂದು ತೋರಿದಾಗ ಹಿಡಿದುಕೊಳ್ಳಹೋಗಲು ಅದು ನನ್ನನ್ನೇ ತನ್ನ ಜೊತೆಗೆ ಕರೆದುಕೊಳ್ಳಲು ಯತ್ನಿಸಿತು. ಅದರೊಡನೆ ಚಕ್ಕಂದ ನನಗೆ ಬೇಕಾಗಿರಲಿಲ್ಲ. ನನ್ನ ಪ್ರಯತ್ನ ಸಫಲವಾಗದೆ ಇದ್ದುದನ್ನು ಕಂಡು ಲಲಿತೆಯನ್ನು ಏನೋ ಹೇಳಿ ಒಳಗೆ ಕಳುಹಿಸಿ ಮತ್ತೊಂದು ಸಾರಿ ಮಹತ್ಪ್ರಯತ್ನವನ್ನು ಮಾಡಿ ಬಿಂದಿಗೆಯನ್ನು ತೆಗೆದಿರಿಸಿದೆ. ಬಿಂದಿಗೆಯ ತಳ ಸ್ವಲ್ಪ ಒಡೆಯಿತು; ನೀರು ತುಳಕಿ ನನ್ನ ಉಡುಪೆಲ್ಲ ಒದ್ದೆಯಾಯಿತು. ಆದರೂ ಲಲಿತೆ ಪುನಃ ಬರುವುದರೊಳಗೆ ಬಿಂದಿಗೆಯನ್ನು ತೆಗೆದಿಟ್ಟಿದ್ದೆ. ಲಲಿತೆ ಬಾವಿಯ ಕಟ್ಟೆಯ ಮೇಲೆ ಪಂಚೆಯನ್ನು ಹರಡಿ ಸಾಬೂನು ಹಾಕಲು ಪ್ರಾರಂಭಿಸಿದಳು. ನಾನು ಹತ್ತಿರವೇ ನಿಂತಿದ್ದವನು ಸುಮ್ಮ ನಿರಲಾರದೆ ಪಂಚೆಯನ್ನು ಎಳೆದು ಕುಚೇಷ್ಟೆ ಮಾಡಹೋಗಲು ಸಾಬೂನು ಜಾರಿ ಬಾವಿಗೆ ಬಿದ್ದುಬಿಟ್ಟಿತು. "ನೋಡಿ, ನಿಮ್ಮ ಹುಡುಗಾಟದ ಫಲ! ಸಾಬೂನು ತಂದು ನೀವೇ ಹಾಕಿಕೊಳ್ಳಿ" ಎಂದುಬಿಟ್ಟು ಲಲಿತೆ ಮನೆಯೊಳಕ್ಕೆ ಹೊರಟುಹೋದಳು. ತಪ್ಪೇನೋ ನನ್ನದಾಗಿಯೇ ಕಾಣು ತ್ತಿತ್ತು. ಆದರೆ ಲಲಿತೆ ಬೇಕೆಂದು ತಾನಾಗಿಯೇ ಸಾಬೂನನ್ನು ಬೀಳಿಸಿರ ಬೇಕು ಎಂಬ ಸಂಶಯ ಇವತ್ತಿಗೂ ನನ್ನನ್ನು ಬಾಧಿಸುತ್ತಲೇ ಇದೆ.

ನಾನು ಮತ್ತೆ ಆ ಬಿಂದಿಗೆಯೊಡನೆ ಹೆಣಗಾಡಿ ಪಂಚೆಯನ್ನು ಒಗೆ ಮುಗಿಸಿದೆ.

ಹೀಗೆ ನಮ್ಮ ಪ್ರಣಯಯಾತ್ರೆಯಲ್ಲಿ ಮೂರು–ನಾಲ್ಕು ದಿನಗ ಕಳೆಯುವುದರೊಳಗೆ ನಮಗೂ ಆ ಹೊಸ ಜೀವನಕ್ಕೂ ಹೊಂ ಬಂದಹಾಗಾಯಿತು. ಸಣ್ಣ ಪುಟ್ಟ ತೊಂದರೆಗಳೇನೋ ಬೇಕಾದಷ ಬಂದು ನನ್ನನ್ನು ಹಾಸ್ಯಮಾಡುವುದಕ್ಕೆ ಲಲಿತೆಗೆ ಅವಕಾಶವನ್ನು ಕ ಕೊಟ್ಟುವು. ಆದರೆ ಬೆಳುದಿಂಗಳಿನ ದಿನ ಬಂದಾಗ ತೊರೆಯ ದ ಮರಳಿನಮೇಲೆ ವಿಹರಿಸುವುದರಲ್ಲಿ ಈ ತೊಂದರೆಗಳನ್ನೆಲ್ಲಾ ಮರೆತೆ ನಿತ್ಯವೂ ರಾತ್ರಿ ತೊರೆಯ ಬಳಿಯಲ್ಲೇ ಊಟಮಾಡುತ್ತಿದ್ದೆವು. ಬೆಳುದಿಂ ನಲ್ಲಿ ಆ ಮರಳು ದಿಬ್ಬಗಳೂ ಅವುಗಳ ನಡುವೆ ಬೆಳ್ಳಿಯ ಸೂತ್ರದ ಹೊಳೆಯುವ ಸಣ್ಣ ಪ್ರವಾಹವೂ ಮನಸ್ಸನ್ನು ಸೆಳೆಯುತ್ತಿದ್ದು ಊಟವಾದಮೇಲೆ ಸ್ವಲ್ಪ ದೂರ ತಿರುಗಾಡಿಕೊಂಡು ಬರಬೇಕಂದು ಆಸೆ. ಲಲಿತೆಗೂ ಅದು ಇಷ್ಟವಾದರೂ ರಾತ್ರಿಯ ಹೊತ್ತು ಆ ನಿಜ ಸ್ಥಳದಲ್ಲೆಲ್ಲಾ ತಿರುಗಲು ಅವಳಿಗೆ ಹದರಿಕೆ. ಅಲ್ಲಿ ಸುತ್ತಮುತ್ತ ಇ ಭೂತಾಳೆಯ ಬೇಲಿಗಳಲ್ಲಿ ನೂರುಗಟ್ಟಲೆ ಹಾವುಗಳಿದ್ದುವೆಂದು ಕೇಳಿದ್ದರಿ ಸ್ವಲ್ಪ ಎಲೆ ಅದುರಿದ ಸದ್ದಾದರೂ ಅವಳು ಬೆಚ್ಚಿಬೀಳುವಳು. ಆ ಅವಳಿಗೆ ಹಾವಿನ ಭಯಕ್ಕಿಂತ ಪಿಶಾಚಿಯ ಭಯ ಇನ್ನೂ ಹೆಚ್ಚಾಗಿದ್ದ ತೋರುತ್ತದೆ. ಶಿವಗೆರೆಯ ಪಿಶಾಚ ಇಲ್ಲಿಗೂ ಬರುವುದೆಂದು ಭಾವಿಸಿದಳ ಏನೋ, ನನ್ನೊಡನೆ ಬರುವುದಿಲ್ಲವೆಂದು ಕಂಠೋಕ್ತವಾಗಿ ಹೇಳಿಬಿಟ್ಟ ಹೊಸ್ನೂರಿಗೆ ಬಂದಮೇಲೆ ಮೂರು–ನಾಲ್ಕು ದಿನವೂ ವಿಧವಿಧವ ರೀತಿಯಲ್ಲಿ ಆಶಾಭಂಗವನ್ನನುಭವಿಸಿದ್ದ ನನಗೆ ಅವಳ ಮಾತನ್ನು ಕ ಸ್ವಲ್ಪ ಕೋಪವೇ ಬಂತು. ಆದರೆ ಕೋಪಗೊಂಡದ್ದರಿ ಪ್ರಯೋಜನವೇನೂ ಕಾಣಲಿಲ್ಲ. ಲಲಿತೆಯೇನೋ ಕೋಪಕ್ಕೆ ಹೆದರಿ ನ ಜೊತೆಯಲ್ಲಿ ಬರಬಹುದು. ಆದರೆ ಅವಳ ಮನಸ್ಸು ಹೆದರಿಕೆಯ ಅಧ ಮುನಿಸಿನ ಸ್ಥಿತಿಯಲ್ಲಿರುವ ಭಾಗ್ಯಕ್ಕೆ ಮನೆಯಲ್ಲಿದ್ದರೇನು, ಬೆಳುದಿ ನಲ್ಲಿದ್ದರೇನು! ಅಂತೂ ನನ್ನ ಉತ್ಸಾಹಕ್ಕೂ ಅವಳ ಹೆದರಿಕೆಗೂ ನ ಯುದ್ಧದಲ್ಲಿ ಅವಳೇ ಗೆದ್ದಳೆನ್ನಬಹುದು. ವಾಕಿಂಗ್ ಹೋಗುವುದಕಾ

ಲಿಲ್ಲ; ಆದರೆ ನಮ್ಮ ಮನೆಯ ಹತ್ತಿರದಲ್ಲೇ ಮರಳಿನಲ್ಲಿ ನಿದ್ದೆಬರುವವರೆಗೂ ಮಾತಾಡುತ್ತೆ ಕುಳಿತಿರುತ್ತಿದ್ದೆವು.

ನಾವು ಹೊನ್ನೂರಿಗೆ ಬಂದು ಹದಿನೇಳು-ಹದಿನೆಂಟು ದಿನಗಳಾಗಿರ ಬಹುದು. ಒಂದು ದಿನ ರಾತ್ರಿ ಎಂದಿಗಿಂತಲೂ ಸ್ವಲ್ಪ ಹೆಚ್ಚು ಹೊತ್ತು ತೊರೆಯ ನೀರಿನಲ್ಲಿ ಕಾಲಿಟ್ಟುಕೊಂಡು ಮಾತಾಡುತ್ತಾ ಕುಳಿತಿದ್ದೆವು. ಮಾರನೆಯ ದಿನ ಬೆಳಗ್ಗೆ ಲಲಿತೆ ನೆಗಡಿ, ಕೆಮ್ಮು, ತಲೆನೋವು ಎನ್ನುತ್ತ ಮಲಗಿದಳು. ಕಾಫಿಮಾಡುವ ಕೆಲಸ ಮತ್ತೆ ನನ್ನ ತಲೆಯಮೇಲೇ ಬಿತ್ತು. ಲಲಿತೆ ಘಳಿಗೆಗೊಂದುಸಲ ಸೊರಗುಟ್ಟುತ್ತ "ನಾನೇ ಮಾಡು ತ್ತೇನೆ, ನಿಮ್ಮ ಕೈಯಲ್ಲಾಗುವುದಿಲ್ಲ.... ಅಬ್ಬಾ, ತಲೆನೋವು.... ನಾನು ಮಾಡುತ್ತೇನೆ ಬಿಡಿ....ನಿನ್ನೆ ನೀರಿನಲ್ಲಿ ಅಷ್ಟು ಹೊತ್ತು ಇರಬಾರ ದಾಗಿತ್ತು, ಎಲ್ಲಾ ನಿಮ್ಮ ಹುಚ್ಚಿನ ಫಲ....ಹಾಗೆ ಮಾಡಿದರೆ ಕಾಫಿ ಹೊಗೆಯ ವಾಸನೆಯಾಗುತ್ತೆ ಬಿಡಿ....ನೆಗಡಿಯಿಂದ ಉಸಿರಾಡುವುದಕ್ಕೇ ಆಗದಹಾಗಾಗಿಬಿಟ್ಟಿದೆ....ನಿಮ್ಮ ಕೈಯಲ್ಲಿ ಆಗುವುದಿಲ್ಲ, ಸುಮ್ಮನಿರ ಬಾರದೆ" ಎಂದು ಮಲಗಿಕೊಂಡೇ ಹೇಳುತ್ತಿದ್ದಳು. ಕಾಫಿ ಮಾಡುವುದಕ್ಕೆ ಇಷ್ಟವಿದ್ದರೆ ಎದ್ದುಬಂದು ಪಾತ್ರೆಯಲ್ಲಿ ನೀರಿಡಬಾರದೆ! ತಲೆನೋವು ಎಂದು ಹೇಳುತ್ತಿರುವಾಗಲೂ ಅವಳು ಮಾಡಿಕೊಳ್ಳಲೆಂದು ನಾನಾಗಿಯೇ ಬಿಟ್ಟು ಹೋಗುವುದು ಹೇಗೆ! ಅವಳನ್ನು ಮೈಸೂರಿನಿಂದ ಇಲ್ಲಿಗೆ ಕರೆದುಕೊಂಡು ಬಂದದ್ದು ರೋಗರುಜಿನಗಳನ್ನು ಲೆಕ್ಕಿಸದೆ ದುಡಿಯಲೆಂದೆ!....ನೆಗಡಿ ಯೇನೋ ದೊಡ್ಡ ಖಾಯಿಲೆಯಲ್ಲ, ಕಾಫಿಮಾಡುತ್ತಾ ಹಾಗೇ ಬೆಂಕಿ ಕಾಯಿಸಿಕೊಂಡರೆ ಸ್ವಲ್ಪ ಕಡಿಮೆಯಾದರೂ ಆಗಬಹುದು. ಲಲಿತೆಗೆ ಇದು ಹೊಳೆಯಲೇ ಇಲ್ಲವೇನೋ, ಕಾಫಿ ಮಾಡುತ್ತೇನೆಂದು ಬಾಯಲ್ಲಿ ಹೇಳಿದ್ದೇ ಹೊರತು ಕಾರ್ಯತಃ ಮಾಡುವುದಕ್ಕೆ ಮುಂದುವರಿಯಲಿಲ್ಲ. ಇದರಮೇಲೆ ತನ್ನ ನೆಗಡಿಯಮೇಲೆ ವ್ಯಾಖ್ಯಾನಮಾಡಿ ಅದು ನನ್ನಿಂದ ಬಂತೆಂಬ ಅಪವಾದವನ್ನು ಹೊರಿಸಿದ್ದಲ್ಲದೆ ಖಾಯಿಲೆ ಹೆಚ್ಚಾಗಬಹುದೆಂಬ ಭಯವನ್ನು ಬಿತ್ತಿದಳು. ಮಧ್ಯಾಹ್ನವಾಗುತ್ತ ಬಂದಹಾಗೆಲ್ಲಾ ಅವಳ ತಲೆ ನೋವು ವೃದ್ಧಿಯಾಗುತ್ತಾ ಬಂದು ನನಗೆ ಸ್ವಲ್ಪ ರಗಳೆಗಿಟ್ಟುಕೊಂಡಿತು. ಗುಂಡಪ್ಪನವರು ಮೈಸೂರಿಗೆ ಹೋಗಬೇಕೆಂದು ಹೊತ್ತಿಗೆ ಮುಂಚೆ ಅಡಿಗೆ

ಮಾಡಿಸಿ ಊಟಕ್ಕೆ ಕರೆದದ್ದರಿಂದ ನನಗೆ ಒಂದು ದೊಡ್ಡ ತೊಂದರೆ ತಪ್ಪಿದ ಹಾಗಾಯಿತು. ಆ ದಿನವೆಲ್ಲಾ ಮನೆಯಲ್ಲಿ ಅಮೃತಾಂಜನದ ಸೂರೆ; ನೀಲಗಿರಿ ತೈಲದ ಅಸಾಧ್ಯ ವಾಸನೆ. ಲಲಿತೆಗೆ ಖಾಯಿಲೆ ನಿಜವಾಗಿ ಅಷ್ಟು ಬಲವಾಗಿರಲಿಲ್ಲವೆಂದು ನನಗೆ ಸ್ವಲ್ಪ ಸಂಶಯವಿದ್ದೇ ಇತ್ತು. "ತಲೆನೋವು ಅಷ್ಟೇನೂ ಹೆಚ್ಚಾಗಿರಲಿಲ್ಲ. ಆದರೂ ನೀವು ಅಮೃತಾಂಜನ ಹಚ್ಚಿ ಹಣೆಗೆ ಪಟ್ಟುಹಾಕಲಿ ಅಂತ....ನೀವೂ ಒಂದು ದಿನ ಉಪಚಾರ ಮಾಡಲಿ ಅಂತ ಸುಮ್ಮನಿದ್ದೆ" ಎಂದು ಅವಳು ಈಚೆಗೆ ಒಪ್ಪಿಕೊಂಡಿದ್ದಾಳೆ.

ಮಾರನೆಯ ದಿನ ಲಲಿತೆ ಇನ್ನೂ ಸ್ವಲ್ಪ ಕೆಮ್ಮುತ್ತಿದ್ದರೂ ತಲೆನೋವು ನಿಂತು ಸ್ವಸ್ಥವಾಗಿದ್ದದ್ದರಿಂದ ನಾವು ಅಲ್ಲಿಗೆ ಮೂರು ಮೈಲಿ ದೂರದಲ್ಲಿ ನದೀತೀರದಲ್ಲಿ ದ್ವಾರಂಗನ ಬೆಟ್ಟಕ್ಕೆ ಹೋಗಬೇಕೆಂದು ಏರ್ಪಾಡು ಮಾಡುತ್ತಿದ್ದೆವು. ನಾವು ಹೊಸೂರಿಗೆ ಬಂದ ದಿನದಿಂದಲೂ ಅಲ್ಲಿಗೆ ಕರೆದುಕೊಂಡುಹೋಗಬೇಕೆಂದು ಲಲಿತೆ ನನ್ನನ್ನು ಪೀಡಿಸುತ್ತಿದ್ದಳು. ನಾವು ಆ ವಿಷಯವನ್ನು ಯೋಚನೆಮಾಡುತ್ತಿರುವಾಗ ಮೈಸೂರಿನಿಂದ ನಮ್ಮ ತಾಯಿ ಬಂದರು. ಹಿಂದಿನ ದಿನ ಅಲ್ಲಿಗೆ ಹೋಗಿದ್ದ ಗುಂಡಪ್ಪನವರು ಲಲಿತೆಯ ಖಾಯಿಲೆಯನ್ನು ಸ್ವಲ್ಪ ದೊಡ್ಡದುಮಾಡಿ ಹೇಳಿದ್ದರಿಂದ ಅವರು ಗಾಬರಿಗೊಂಡು ಬಂದಿದ್ದರು. ಬಂದೊಡನೆ "ಶುದ್ಧ ಹುಡುಗಾಟ, ಅವಳೊಬ್ಬಳನ್ನೇ ಈ ಕಾಡಿನಲ್ಲಿ ತಂದುಬಿಟ್ಟು ತಮಾಷೆ ನೋಡುವುದುಂಟೆ! ತಲೆನೋವು, ಮೂಗುನೋವು ಅಂದರೆ ಹತ್ತಿರ ಒಂದು ಆಸ್ಪತ್ರೆ ಸಹ ಇಲ್ಲ" ಎಂದು ನನಗೆ ಸ್ವಲ್ಪ ಬುದ್ಧಿಹೇಳಿದರು. ಲಲಿತೆಯ ದೆಸೆಯಿಂದ ಈ ಮಾತೆಲ್ಲಾ ಕೇಳಬೇಕಾಯಿತಲ್ಲ ಎಂದು ಸ್ವಲ್ಪ ಬೇಸರವಾಗಿ ನಾನು ಅವಳ ಮೇಲೆ ತಿರುಗಿಬಿದ್ದು "ಏನೋ ಸ್ವಲ್ಪ ನೆಗಡಿ; ತಲೆನೋವು ಆದರೆ ಅದೇ ದೊಡ್ಡ ಖಾಯಿಲೆ ಅಂತ ಮಲಗಿಬಿಡಬೇಕ" ಎಂದು ಹೇಳಿದೆ. ನಾನು ಅಷ್ಟು ಹೇಳಿ ಮುಗಿಸುವುದರೊಳಗೆ ಅವಳು ಉಸಿರುಬಿಡುವುದಕ್ಕೆ ಸಹ ವಿರಾಮವಿಲ್ಲದಂತೆ ಐದು ನಿಮಿಷ ಒಂದೇಸಮ ಕೆಮ್ಮಿಬಿಟ್ಟಳು. ನಮ್ಮ ತಾಯಿ "ಸ್ವಲ್ಪ ಹಾಲನ್ನಾದರೂ ಕಾಯಿಸಿಕೊಡುತ್ತೇನೆ, ಕುಡಿದರೆ ಸ್ವಲ್ಪ ಸಮಾಧಾನವಾಗುತ್ತೆ" ಎಂದು ಒಳಕ್ಕೆ ಹೋದೊಡನೆಯೇ ಲಲಿತೆಯ ಕೆಮ್ಮು ನಿಂತು ಅದಕ್ಕೆ ಬದಲಾಗಿ ಸ್ವಲ್ಪ ಹುಸಿನಗೆ ಕಾಣಿಸಿ

ಕೊಂಡಿತು. ಅದನ್ನು ನೋಡಿ ಮೊದಲೇ ಉರಿಯುತ್ತಿದ್ದ ನನ್ನ ಕೋಪಕ್ಕೆ ತುಪ್ಪವನ್ನು ಎರೆದಂತಾಗಿ ಅವಳ ಮೇಲೆ ಸೇಡು ತೀರಿಸಿಕೊಳ್ಳಬೇಕೆಂದು ನಿಶ್ಚಯಿಸಿ ನಮ್ಮ ತಾಯಿ ಹಾಲು ತೆಗೆದುಕೊಂಡು ಬಂದೊಡನೆ ನಾನು ಕಾರ್ಯಭಾಗವನ್ನು ಪ್ರಾರಂಭಿಸಿದೆನು. "ರಂಗನಬೆಟ್ಟಕ್ಕೆ ಹೋಗೋಣ ಅಂತಿದ್ದೆವು, ಈಗ ಅಲ್ಲಿ ಹೊಸದಾಗಿ ಬಂಗಲೆ ಕಟ್ಟಿದ್ದಾರೆ, ಎರಡು ದಿನ ಇದ್ದು ಬರುವುದಕ್ಕೆ ಬಹಳ ಚೆನ್ನಾಗಿದೆ. ಹೋಗೋಣ ಅಂದರೆ ಈಗಲೇ ಇವಳಿಗೆ ನೆಗಡಿ, ಕೆಮ್ಮು ಬಂದುಬಿಟ್ಟಿದೆ!" "ರಂಗನ ಬೆಟ್ಟವೂ ಬೇಡ, ಸಿಂಗನ ಬೆಟ್ಟವೂ ಬೇಡ. ಅಲ್ಲೆಲ್ಲಾ ಅಲೆದು ಲಲಿತೆಯ ಖಾಯಿಲೆ ನ್ಯೂಮೋನಿಯಾಕ್ಕೆ ತಿರುಗಲಿ. ಬೆಟ್ಟ ಎಲ್ಲಿಗೂ ಓಡಿಹೋಗುವುದಿಲ್ಲ, ಇನ್ನು ಯಾವಾಗಲಾದರೂ ಹೋದರಾಯಿತು" ಎಂದು ನಮ್ಮ ತಾಯಿ ತೀರ್ಪು ಕೊಟ್ಟುಬಿಟ್ಟರು. ಈಗ ಹುಸಿನಗೆ ನಗುವುದಕ್ಕೆ ನನ್ನ ಸರದಿ. ಉಸಿರು ಬಿಡಲಾರದೆ ಬಹಳ ಕಷ್ಟದಿಂದ ಮಾತಾಡುವವಳಂತೆ ನಟಿಸುತ್ತಿದ್ದ ಲಲಿತೆಯ ಕೆಮ್ಮು ಇದ್ದಕ್ಕಿದ್ದಹಾಗೆಯೇ ಇಳಿದುಹೋಯಿತು. "ಕೆಮ್ಮು ಈಗ ಅಷ್ಟೇನೂ ಇಲ್ಲ, ಎಲ್ಲೋ ಒಂದೊಂದು ಸಲ ಬರುತ್ತದೆ" ಎಂದಳು. "ಇಲ್ಲಕಣಮ್ಮ, ಅವಳಿಗೆ ನಿನ್ನೆಯೆಲ್ಲಾ ಒಂದು ಅಗುಳು ಅನ್ನ ಸಹ ಸೇರಲಿಲ್ಲ, ರಾತ್ರಿ ನೂರರಡು ಡಿಗ್ರಿ ಜ್ವರ ಬಂದಿತ್ತು. ಇಷ್ಟಾದರೂ ಬೆಟ್ಟಕ್ಕೆ ಹೋಗುವುದು ಬೇಡ ಎಂದರೆ ಕೇಳುವುದಿಲ್ಲ. ಹೀಗೇ ಅವಳು ಖಾಯಿಲೆ ತಂದುಕೊಳ್ಳುವುದು" ಎಂದು ನಾನು ಮತ್ತೆ ಹೇಳಿದೆ. ಲಲಿತೆ ತುಟಿಯನ್ನು ಬಿರುಕಿಸಿಕೊಂಡು ಕೆಂಡವನ್ನುಗುಳುವಂತೆ ನನ್ನ ಕಡೆ ನೋಡಿದಳು—ಆ ಬಗೆಯ ಕೋಪದಲ್ಲಿದ್ದಾಗ ಅವಳು ಬಹು ಸುಂದರಿಯಾಗಿ ಕಾಣುತ್ತಾಳೆ; ನನಗೆ ಅವಳು ಇನ್ನೂ ಸ್ವಲ್ಪ ಕೋಪಗೊಂಡರೆ ಒಳ್ಳೆಯದು ಎನ್ನಿಸಿತು. "ಜ್ವರ ಏನೂ ಹೆಚ್ಚಾಗಿರಲಿಲ್ಲ, ಸ್ವಲ್ಪ ಮೈ ಬಿಸಿಯಾಗಿತ್ತೋ ಇಲ್ಲವೋ. ಬೆಟ್ಟಕ್ಕೆ ಹೋಗಿ ದೇವರ ದರ್ಶನ ಮಾಡಿಕೊಂಡು ಬಂದುಬಿಡೋಣ. ಮತ್ತೆ ಇಲ್ಲಿಗೆ ಬರುವುದು ಯಾವಾಗಲೋ" ಎಂದು ಲಲಿತೆ ನಮ್ಮ ತಾಯಿಯ ದೈವಭಕ್ತಿಯ ಮೂಲಕ ತನ್ನ ಸಂಕಲ್ಪವನ್ನು ನೆರವೇರಿಸಿಕೊಳ್ಳಲು ಪ್ರಯತ್ನಮಾಡಿದಳು. ನಮ್ಮ ತಾಯಿ ಅವಳ ಬೂಟಾಟಿಕೆಗೆ ಸಿಕ್ಕಲಿಲ್ಲ. "ನಿನ್ನೆ ನೂರೆರಡು ಡಿಗ್ರಿ ಜ್ವರ ಇತ್ತು ಅಂತೀಯೆ, ಈ

ಕೊಂಪೆಯಲ್ಲಿ ಒಂದು ಔಷಧಿ ನೀರು ಸಹ ಸಿಕ್ಕುವುದಿಲ್ಲ. ಖಾಯಿಲೆ ಹೆಚ್ಚಾದರೆ ಏನು ಗತಿ! ಮೈಸೂರಿಗೇ ಹೊರಟುಹೋಗೋಣ ನಡಿ” ಎಂದುಬಿಟ್ಟರು. ನಮ್ಮಿಬ್ಬರ ಪ್ರಣಯ ಕಲಹ ಹೀಗೆ ಪರಿಣಮಿಸುವುದೆಂದು ನಾವು ತಿಳಿದಿರಲಿಲ್ಲ. ನಾನೂ ಲಲಿತೆಯೂ ಈಗ ಒಂದಾದೆವು. “ನಿನ್ನೆ ಒಂದು ದಿನ ಜ್ವರ ಬಂದರೆ ಊರು ಬಿಟ್ಟು ಹೋಗಬೇಕೆ? ರಂಗನ ಬೆಟ್ಟಕ್ಕೆ ಹೋಗದಿದ್ದರೆ ಬೇಡ, ಮನೆಯಲ್ಲಿದ್ದು ಸುದಾರಿಸಿಕೊಂಡರೆ ಸರಿ ಹೋಗುತ್ತೆ” ಎಂದು ನಾನು ಹೇಳುತ್ತಿದ್ದೆ—ಆದರೆ ಆ ಸಮಯಕ್ಕೆ ಸರಿಯಾಗಿ ಲಲಿತೆಗೆ ಮತ್ತೆ ಕೆಮ್ಮು ಬಂತು—ಈ ಸಲ ಔತಣವಿಲ್ಲದೆಯೇ ಬಂದ ನಿಜವಾದ ಕೆಮ್ಮು. ಅದನ್ನು ನೋಡಿ ನಾವು ಮೈಸೂರಿಗೆ ಹೊರಟೇ ತೀರಬೇಕೆಂದು ನಮ್ಮ ತಾಯಿ ಹಟಹಿಡಿದರು. ಅವರ ಮನಸ್ಸನ್ನು ತಿರುಗಿಸಲು ನಾವು ಮಾಡಿದ ಪ್ರಯತ್ನವೊಂದೂ ಸಾಗಲಿಲ್ಲ. ನಾನೂ ಲಲಿತೆಯೂ ಒಬ್ಬರ ಮುಖವನ್ನೊಬ್ಬರು ನೋಡಿಕೊಂಡು ಒಬ್ಬರನ್ನೊಬ್ಬರು ದೃಷ್ಟಿಯಲ್ಲಿ ಎಷ್ಟುಮಟ್ಟಿಗೆ ದೂರಬಹುದೋ ಅಷ್ಟು ದೂರಿದೆವು. ಮೈಸೂರಿಗೆ ಹೋಗುವುದು ನಿಶ್ಚಯವಾಗಿಹೋಯಿತು ನಾವು ಬಹಳ ದಿನದಿಂದ ಆಸೆಪಟ್ಟು ಪಡದಿದ್ದ ಪ್ರಣಯಮಾಸವು ಇಪ್ಪತ್ತು ದಿನಗಳಲ್ಲಿಯೇ ಮುಕ್ತಾಯವಾಯಿತು.



59—37—ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರಾದ
ಜಿ. ಶ್ರೀನಿವಾಸರಾಯರವರು ಮುದ್ರಿಸಿರುವರು